# శ్రీ గురుజగన్నాథదాసర కృతిరత్నమాలా



శ్రీ గురుజగన్నాథదాస సేవా సమితి. కౌతాళం

# ಶ್ರೀಗುರುಜಗನ್ನಾಥದಾಸರ ಕೃತಿರತ್ನಮಾಲಾ

ಸಂಪಾದಕ:

ಕೆ. ಅಪ್ಪಣ್ಣಾಚಾರ್ಯ
ಸ್ಪೆಷಲ್ ಆಫೀಸರ್
ದಾಸಸಾಹಿತ್ಯ ಪ್ರಾಜೆಕ್ಟ್ ಟಿ.ಟಿ.ಡಿ.
**ತಿರುಪತಿ**

This Book is Published with the financial assistance of Tirumala Tirupati Devasthanams under their Scheme Aid to Publish religious Books.

ಪ್ರಕಾಶಕರು:

ಶ್ರೀಗುರು ಜಗನ್ನಾಥದಾಸ ಸೇವಾ ಸಮಿತಿ
ಕೌತಾಳಂ

ನನ್ನ ಎಲ್ಲ ತರಹದ ಸತ್ಕಾರ್ಯಗಳ ಹಿನ್ನೆಲೆಯಲ್ಲಿ ನಿಂತು ಸಹಕರಿಸುತ್ತಿರುವ ಸಹಧರ್ಮಚಾರಿಣಿ ಕುಂ|| ಸೌ|| ವಿಮಲಾಳನ್ನು ಈ ಸಂದರ್ಭದಲ್ಲಿ ಸ್ಮರಿಸದೇ ಇರಲಾರೆ.

ಅಚ್ಚಿನ ವಿಷಯದಲ್ಲಿ ಎಲ್ಲ ವಿಧದಿಂದಲೂ ಸಹಕರಿಸಿದ ಗಜೇಂದ್ರಗಡದ ಗುರುಜಗನ್ನಾಥ ಸೇವಾ ಸಮಿತಿಯ ಸಭ್ಯರೆನಿಸಿದ ಶ್ರೀ ಹನುಮಂತ ಭಟ್ ತಾಸೀನ, ಬಿ. ಬಿ. ಬಾಕಳೆ ಹಾಗೂ ಶ್ರೀ ಶ್ರೀನಿವಾಸ ಚುಂಚಾ ಇವರನ್ನು ನೆನೆಯುತ್ತಾ ಇವರಿಗೆ ದಾಸರು ಸನ್ಮಂಗಳವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ಪುಸ್ತಕ ಪ್ರಕಾಶನ ವಿಷಯದಲ್ಲಿ ಪೂರ್ಣ ನೆರವು ನೀಡಿದ ತಿರುಮಲ-ತಿರುಪತಿ ದೇವಸ್ಥಾನಗಳ ಪಾಲಕ ವರ್ಗಕ್ಕೆ ಅನಂತ ಧನ್ಯವಾದಗಳು. ಇವರ ಸಹಕಾರವಿಲ್ಲದಿದ್ದಲ್ಲಿ ಈ ಪುಸ್ತಕ ಬೆಳಕು ಕಾಣುತ್ತಿರಲಿಲ್ಲ. ಈ ನೆರವಿನ ವಿಷಯದಲ್ಲಿ ಸಲಹೆ-ಸಹಕಾರಗಳನ್ನು ನೀಡಿದ ಆತ್ಮೀಯರೂ, ಪಿತೃಸದೃಶರೂ, ಸದಾ ನನ್ನ ಹಿತೈಷಿಗಳೂ ಆದ ಕೆ. ಸುಬ್ಬಾರಾವ್ ಎಮ್. ಎ. ಎಡಿಟರ್ ಸಪ್ತಗಿರಿ ಇವರಿಗೆ ನನ್ನ ಅನಂತ ವಂದನೆಗಳು. ಇದರಂತೆ ಎಲ್ಲ ವಿಷಯದಲ್ಲೂ ಸಹಕಾರ ನೀಡಿದ ಹಿರಿಯರೂ ಮಾನ್ಯರೂ, ಆದ ಶ್ರೀ ಆದ್ಯ ರಾಮಾಚಾರ್ಯರ ಉಪಕಾರ ಅವಿಸ್ಮರಣೀಯ. ಇವರಿಗೆ ನನ್ನ ಅನಂತ ವಂದನೆಗಳು. ಸುಂದರವಾಗಿ ಅಲ್ಪಾವಧಿಯಲ್ಲಿ ಮುದ್ರಿಸಿಕೊಟ್ಟ ಗದುಗಿನ ಶ್ರೀ ಫ. ಶಿ. ಭಾಂಡಗೆಯವರಿಗೂ, ಇವರ ಸಿಬ್ಬಂದಿಗೂ ಧನ್ಯವಾದಗಳು.

ದಾಸರ ದಾಸ

**ಕೆ. ಅಪ್ಪಣ್ಣಾಚಾರ್ಯ**

# ವಿಷಯಾನುಕ್ರಮ



ದಾಸರು ಪೂಜಿಸಿ, ಅರ್ಚಿಸಿದ ಹಯವದನಮೂರುತಿ



ದಾಸರು ಪೂಜಿಸಿದ ಶ್ರೀಕರಮೂರುತಿ



ದಾಸರು ಪೂಜಿಸಿದ ನರಸಿಂಹ ಮೂರುತಿ



ದಾಸರು ಅರ್ಚಿಸಿದ ಶ್ರೀದವಿಠಲರಿಗೆ ಒಲಿದ ಶ್ರೀರಾಮ



ದಾಸರಿಂದ ಅರ್ಚಿತನಾದ
ಶ್ರೀದವಿಠಲರಿಗೆ ಒಲಿದು ನಲಿದ
ಶ್ರೀ ಮುರಳೀ ಕೃಷ್ಣ



ದಾಸರು ಅರ್ಚಿಸಿದ
ಶ್ರೀ ವೇದವ್ಯಾಸ ಮೂರುತಿ

ಅಪರೋಕ್ಷಜ್ಞಾನಿಗಳಾದ
ಶ್ರೀ ಗುರು ಜಗನ್ನಾಥದಾಸಾರ್ಯರಿಂದ ಪ್ರತಿಷ್ಠಿತರಾದ
**ಶ್ರೀ ಶ್ರೀ ಗುರುಸಾರ್ವಭೌಮರು**



ಪಾಹಿ ಕೌತಳ ಕ್ಷೇತ್ರ ನಿಜಕೃತ ಮಂದಿರ ಪ್ರಿಯಸುವ್ರತ.

1. ಕೆಳಗಿನದು ಸಾಲಗ್ರಾಮ ಶಿಲಾ ಬೃಂದಾವನ
2. ಬೃಂದಾವನ ಮೇಲೆ ದಾಸರು ಅರ್ಚಿಸಿದ ಪಂಚ ಭಗವದ್ರೂಪಗಳು
3. ದಾಸರು ಅರ್ಚಿಸಿದ ಹನುಮಂತ ದೇವರು
4. ಹಿಂದೆ ಇರುವುದು ಪಂಚಲೋಹ ಬೃಂದಾವನ
5. ರಾಯರ ಬೃಂದಾವನದ ಪಕ್ಕದಲ್ಲಿ ಗರುಡ, ಶೇಷ, ಮಹಾರುದ್ರದೇವರು.



ಸಾಲಂಕೃತ ಗುರುರಾಜರ ಬೃಂದಾವನ

# ಶ್ರೀಗುರು ಜಗನ್ನಾಥದಾಸರು ಕರ್ನಾಟಕ ಹರಿದಾಸರ ಹಾಗೂ ಅವರ ಸಾಹಿತ್ಯದ ವೈಶಿಷ್ಟ್ಯ

ಭಾರತೀಯರ ನಿಜವಾದ ಸಂಪತ್ತು ವೇದಗಳು. ಇವುಗಳಲ್ಲಿ ಹೇಳದ ವಿಷಯವಿಲ್ಲ. ಸೃಷ್ಟಿ ರಹಸ್ಯದಿಂದ ಹಿಡಿದು ಮಾನವ ಜೀವನದ ಉನ್ನತಿಗೆ ಬೇಕಾಗುವ ಸಕಲ ಸಾಧನ ಪ್ರಕ್ರಿಯೆಗಳು ಇಲ್ಲಿ ಹೇಳಲ್ಪಟ್ಟಿವೆ. ಷೋಪೆನ್‌ಹೋವರ್ ಎನ್ನುವ ಪಾಶ್ಚಾತ್ಯ ವೇದಾಂತಿಯು "ಉಪನಿಷತ್ತಿನಂತೆ ಔನ್ನತ್ಯಾಪಾದಕವೂ, ಕ್ಷೇಮಕರವೂ ಆದ ಪದಾರ್ಥವು ಮತ್ತೊಂದಿಲ್ಲ. ಈ ಉಪನಿಷತ್ತು ಜೀವನ ಕಾಲದಲ್ಲಿ ತಾಯಿಯಂತೆ ಸಮಾಶ್ವಾಸನೆ ನೀಡುವದು. ಅವಸಾನ ಕಾಲದಲ್ಲೂ ಸಹ ಈ ಉಪನಿಷಜ್ಜನನಿಯೇ ನನ್ನನ್ನು ಸತ್ಯವಾಗಿ ಸಮಾಶ್ವಾಸಿಸುವಳು" ಎಂದು ನುಡಿದು ಅಪೌರುಷೇಯಗಳಾದ ಶ್ರುತಿಗಳ ಬಗ್ಗೆ ತನಗಿರುವ ಗೌರವವನ್ನು ಪ್ರಕಟಿಸಿರುವನು.

ಸ್ಮೃತಿ-ಪುರಾಣ-ತಂತ್ರ-ಪೂರ್ವಮೀಮಾಂಸಾ-ಉತ್ತರ ಮೀಮಾಂಸಾದಿ ಶಾಸ್ತ್ರಗಳು ಈ ವೇದವಾಙ್ಮಯದ ಸುಲಭ ವಿವರಣೆಗಳು. ಇವುಗಳಿಗೆ ವ್ಯಾಖ್ಯಾನಗಳು, ಅನೇಕ ಆಚಾರ್ಯರಿಂದ ರಚಿತಗಳಾದ ಭಾಷ್ಯ-ಟೀಕಾ-ಟಿಪ್ಪಣಿಗಳು. ವೈದಿಕ-ಲೌಕಿಕ ಸಂಸ್ಕೃತ ಭಾಷೆಯಿಂದ ಕೂಡಿದ ಭಾರತೀಯರ ಆಧ್ಯಾತ್ಮಿಕ ವಾಙ್ಮಯವನ್ನು ಸಾಮಾನ್ಯವಾಗಿ ಮೂರು ವಿಧದಲ್ಲಿ ವಿಂಗಡಿಸಬಹುದು. 1. ವೇದವಾಙ್ಮಯ 2. ವ್ಯಾಸವಾಙ್ಮಯ 3. ದಾಸವಾಙ್ಮಯ. ವೈದಿಕ ಸಂಸ್ಕೃತ ಭಾಷೆಯಲ್ಲಿರುವ ಅಪೌರುಷೇಯವೆಂದು ಪ್ರಸಿದ್ಧವಾದ ಶ್ರುತಿಯು ವೇದವಾಙ್ಮಯವಾಗಿದೆ.

"ಗೌತಮಸ್ಯ ಋಷೇಶ್ಶಾಪಾತ್ ಜ್ಞಾನೇತ್ವಜ್ಞಾನತಾಂ ಗತೇ
ಸಂಕೀರ್ಣ ಬುದ್ಧಯೋ ದೇವಾ ಬ್ರಹ್ಮರುದ್ರ ಪುರಸ್ಸರಾಃ
ಶರಣ್ಯಂ ಶರಣಂ ಜಗ್ಮುಃ ನಾರಾಯಣಮನಾಮಯಂ
ತೈರ್ವಿಜ್ಞಾಪಿತ ಕಾರ್ಯಸ್ತು ಭಗವಾನ್ಪುರುಷೋತ್ತಮಃ
ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್||"

ಎಂಬ ಸ್ಕಾಂಧ ಪುರಾಣದ ವಚನದಂತೆ, ಶ್ರೀ ಮನ್ನಾರಾಯಣನೇ ವೇದವ್ಯಾಸರೂಪದಿಂದ ಅವತರಿಸಿ ವೇದಗಳನ್ನು ವಿಭಾಗಿಸಿದನು. ವೇದಾರ್ಥ ನಿರ್ಣಾಯಕಗಳಾದ ಹದಿನೆಂಟು ಪುರಾಣಗಳನ್ನೂ, ಉಪಪುರಾಣಗಳನ್ನೂ, ಭಾರತೇತಿಹಾಸವನ್ನೂ ಹಾಗೂ ಬ್ರಹ್ಮಸೂತ್ರಗಳನ್ನೂ ರಚಿಸಿದನು. ಇವೆಲ್ಲವೂ ವ್ಯಾಸವಾಙ್ಮಯಗಳು. (ವ್ಯಾಸಸಾಹಿತ್ಯ)

ವೈದಿಕ ಮತಾಚಾರ್ಯರೆಲ್ಲರೂ ಭಕ್ತಿ ತತ್ವವನ್ನು ಅಂಗೀಕರಿಸಿದವರು. ಇದರಿಂದಾಗಿ ಪರಬ್ರಹ್ಮನಿಗೆ ಈಶತ್ವವನ್ನೂ, ಜೀವನಿಗೆ ದಾಸತ್ವವನ್ನೂ ಯಾವುದೋ ಒಂದು

ಸ್ಥಿತಿಯಲ್ಲಿ ಅಂಗೀಕರಿಸಲೇಬೇಕಾಗುವದು. ಭಕ್ತಿಯ ಭಾವದಿಂದ ಬಾಗಿ ದಾಸತ್ವವನ್ನಂಗೀಕರಿಸಿದ ಎಲ್ಲ ಆಚಾರ್ಯರ, ಋಷಿಗಳ, ಜ್ಞಾನಿಗಳ ವಾಙ್ಮಯವೆಲ್ಲವೂ ದಾಸವಾಙ್ಮಯವಾಗುವುದು. (ದಾಸಸಾಹಿತ್ಯ) ಪ್ರಧಾನವಾಗಿ ಸರ್ವತ್ರ ಸರ್ವದಾಜೀವೇಶರ ಮಧ್ಯದಲ್ಲಿ ದಾಸ-ಈಶ ಭಾವವನ್ನು ಪೂರ್ಣವಾಗಿ ಪ್ರತಿಪಾದಿಸಿದ ಆಚಾರ್ಯ ಮಧ್ವರ ಹಾಗೂ ಅವರ ಅನುಯಾಯಿಗಳ ಗ್ರಂಥಗಳೆಲ್ಲವೂ ದಾಸವಾಙ್ಮಯದಲ್ಲಿ ಸೇರುವವು.

ವೇದಗಳ ನಿಜಾರ್ಥವು ಸರಿಯಾಗಿ ತಿಳಿಯದಾಗಲು, ಪುರಾಣ ಬ್ರಹ್ಮಸೂತ್ರಾದಿಗಳ ಪ್ರಾದುರ್ಭಾವ. ಇವುಗಳ ನಿಜಾರ್ಥವು ಸಹ ತಿಳಿಯದಾಗಲು ಅನೇಕ ಆಚಾರ್ಯರ ವ್ಯಾಖ್ಯಾನ ಗ್ರಂಥಗಳು ಉದ್ಭವಿಸಿದವು. ಕಾಲಾಂತರದಲ್ಲಿ ಸಂಸ್ಕೃತ ಭಾಷೆಯು ಕೇವಲ ಪಂಡಿತವರ್ಗಕ್ಕೆ ಮಾತ್ರ ಮೀಸಲಾಯಿತು. ಸಂಸ್ಕೃತ ಭಾಷೆಯಿಂದ ವಂಚಿತರಾದ ಜನ ಸಾಮಾನ್ಯರಿಗೆ, ಆ ಭಾಷೆಯಲ್ಲಿ ರಚಿತವಾದ ಗ್ರಂಥಗಳೂ, ಅದರಲ್ಲಿ ನಿಕ್ಷಿಪ್ತವಾದ ಆಧ್ಯಾತ್ಮಿಕ ವಿಷಯಗಳೂ, ಗಗನ ಕುಸುಮಗಳಾದವು. ಇದರಿಂದಾಗಿ ಆತ್ಮೋನ್ನತಿಗೆ ಕಾರಣವಾದ ಪರವಿದ್ಯೆಯಿಂದ ಜನರು ದೂರಾದರು. ಈ ಸಂಕಷ್ಟ ಪರಿಸ್ಥಿತಿಯಲ್ಲಿ ಜ್ಞಾನಿಗಳು ಆ ಆ ಪ್ರಾಂತಗಳಲ್ಲಿ ಅವತರಿಸಿ, ಆಡು ಭಾಷೆಯಲ್ಲಿ ಕೃತಿಗಳನ್ನು ರಚಿಸಿ,ವೇದಾಂತ ವಿಜ್ಞಾನವನ್ನು ಹಂಚಿಕೊಟ್ಟರು. ಈ ಹಿನ್ನೆಲೆಯಲ್ಲಿ ಹೊರಹೊಮ್ಮಿದ ಸಾಹಿತ್ಯವೇ **ಕರ್ನಾಟಕ ಹರಿದಾಸ ಸಾಹಿತ್ಯ**. ಈ ಕರ್ನಾಟಕ ಹರಿದಾಸ ಸಾಹಿತ್ಯವು ಆಚಾರ್ಯ ಮಧ್ವರ ಪ್ರಧಾನ ದಾಸಸಾಹಿತ್ಯದ ಭಾವನಾ ತರಂಗಗಳನ್ನೇ ಹೊತ್ತು ಮೊರಹೊಮ್ಮಿದೆ. ಜನ ಸಾಮಾನ್ಯದ ಜಾಗೃತಿಗಾಗಿ ಬೆಳೆದುನಿಂತ ಕರ್ನಾಟಕ ಹರಿದಾಸ ಸಾಹಿತ್ಯವು, ಪದ–ಪದ್ಯ–ಉಗಾಭೋಗ–ಸುಳಾದಿ–ವೃತ್ತನಾಮ–ಲಘುಕಾವ್ಯ–ಮಹಾಕಾವ್ಯಗಳ ರೂಪದಲ್ಲಿ ವ್ಯಾಪಕವಾಗಿದೆ.

ದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂದು ಪ್ರಸಿದ್ಧರಾದ ಆಚಾರ್ಯ ಮಧ್ವರ ಸಂತರದಲ್ಲಿಯೇ ಈ ಕರ್ನಾಟಕ ಹರಿದಾಸ ಸಾಹಿತ್ಯವು ಕಾಣಿಸಿಕೊಂಡಿತು. ಆಚಾರ್ಯ ಮಧ್ವರೇ ಈ ಸಾಹಿತ್ಯಕ್ಕೆ ಸ್ಫೂರ್ತಿಮೂರ್ತಿಗಳು. ಆಚಾರ್ಯರ ದ್ವಾದಶ ಸ್ತೋತ್ರವು ಲಯಬದ್ಧವಾಗಿದೆ. ಸ್ವತಃ ಆಚಾರ್ಯರು ತುಳು ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದರೆಂಬ ಹೇಳಿಕೆಯೂ ಇದೆ. ಲಯಬದ್ಧವಿರುವ ಸಾಹಿತ್ಯದ ದೃಷ್ಟಿಯಲ್ಲಿ ಕನ್ನಡ ಕೀರ್ತನೆಗಳ ರಚನೆಗೆ ಶ್ರೀಕಾರ ಹಾಕಿದವರು ನರಹರಿ ತೀರ್ಥರು. ನಂತರ ಈ ಪರಂಪರೆಯಲ್ಲಿ ಶ್ರೀ ಪಾದರಾಜರು, ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು, ಮಹೀಪತಿದಾಸರು, ಪ್ರಸನ್ನ ವೆಂಕಟದಾಸರು, ವಿಜಯದಾಸರೇ ಮೊದಲಾದ ಮಹಾತ್ಮರು ಮುನ್ನಡೆದರು. ಇಲ್ಲಿಯವರೆಗೆ ಆಗಿಹೋದ ಹರಿದಾಸರ ಸಂಖ್ಯೆ 350 ಕ್ಕೂ ಮೇಲ್ಪಟ್ಟಿದೆ.

ದೇಶದ ಎಲ್ಲಾ ಪ್ರಾಂತಗಳಲ್ಲಿ ಸಾಧುಗಳು, ಸಂತರು, ಹರಿದಾಸರು, ವಾಗ್ಗೇಯಕಾರರು ಅವತರಿಸಿ, ತಮ್ಮ ತಮ್ಮ ಪ್ರಾಂತೀಯ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿರುವರು. ಎಲ್ಲರೂ ತಮ್ಮ ಭಕ್ತಿಯ ಪಾಶದಿಂದ ಭಗವಂತನನ್ನು ಬಿಗಿದು ಕಟ್ಟಿದವರೇ. ಜ್ಞಾನ ವೈರಾಗ್ಯಗಳಿಗೆ ಪ್ರತಿನಿಧಿಗಳೇ. ವಿಚಿತ್ರವೆಂದರೆ ತಮಿಳುನಾಡಿನ ಆಳ್ವಾರರ ಪರಂಪರೆ

ಯಾಗಲಿ, ಕರ್ನಾಟಕದ ಶಿವಶರಣರ ಪರಂಪರೆಯಾಗಲಿ, ತೆಲುಗು ದೇಶದ ಅನ್ನ ಮಾಚಾರ್ಯ, ತ್ಯಾಗರಾಜ, ರಾಮದಾಸರೇ ಮೊದಲಾದ ವಾಗ್ಗೇಯಕಾರರ ಪರಂಪರೆ ಯಾಗಲಿ, ಉತ್ತರ ದೇಶದ ಸಂತರ ಪರಂಪರೆಯಾಗಲಿ ಇಂದಿನವರೆಗೂ ನಡೆದುಬಂದಿಲ್ಲ. ಉದಾಹರಣೆಗೆ ತೆಲುಗು ದೇಶದಲ್ಲಿ ಪದಕವಿತಾ ಪಿತಾಮಹರೆಂದು ಪ್ರಸಿದ್ಧರಾದ ಅನ್ನ ಮಾಚಾರ್ಯರ ಪರಂಪರೆ ಅವರ ಮೊಮ್ಮಗನವರೆವಿಗೆ ಮಾತ್ರ ಮುಂದುವರೆಯಿತು. ಇದರಂತೆ ಎಲ್ಲಾ ಮಹಿತಾತ್ಮರ ಪರಂಪರೆಯು ಸಹ 3,5 ತಲೆಗಳವರೆಗೆ ಮಾತ್ರ ಮುಂದು ವರೆದು ನಂತರದಲ್ಲಿ ಕಾಣದಾಯಿತು. ನರಹರಿ ತೀರ್ಥರಿಂದ ಪ್ರಾರಂಭವಾದ ಕರ್ನಾಟಕ ಹರಿದಾಸ ಪರಂಪರೆಯು ಮಾತ್ರ ಇಂದಿನವರೆಗೂ ಜೀವದ್ಗಂಗೆಯಾಗಿದೆ. ಈ ಪರಂಪ ರೆಗೆ ಒಂದು ವಿಶಿಷ್ಟವಾದ ಸಂಪ್ರದಾಯವೂ ಇದೆ. ಹರಿದಾಸರಿಗೆ ಇರಬೇಕಾದ ವೇಷ ಭೂಷಣದ ರೂಪ ಕಲ್ಪನೆಯನ್ನು ಶ್ರೀ ಪುರಂದರದಾಸರು ತಮ್ಮ ಕೃತಿಗಳಲ್ಲಿ ಸ್ಪಷ್ಟ ಪಡಿಸಿರುವರು.ಹರಿದಾಸರ ವೇಷದಲ್ಲಿ ಮೊಟ್ಟಮೊದಲು ಸಮಾಜಕ್ಕೆ ದರ್ಶನ ನೀಡಿದವರು. ಶ್ರೀ ಪುರಂದರದಾಸರು. "ಆದದ್ದೆಲ್ಲಾ ಒಳಿತೇ ಆಯಿತು" ಎನ್ನುವ ಕೃತಿಯಿಂದ ಪುರಂದರ ದಾಸರು, ತಂಬೂರಿ ಮೀಟುತ್ತಾ, ತುಳಸಿಮಾಲೆಯನ್ನು ಕೊರಳಲ್ಲಿ ಧರಿಸಿ, ಗೋಪಾಳ ಪುಟ್ಟಿಯನ್ನು ಭುಜಕ್ಕೆ ಹಾಕಿಕೊಳ್ಳಬೇಕೆಂದು ಸೂಚಿಸಿರುವರು. ಇದರಂತೆ "ತಂಬೂರಿ ಮೀಟಿದವ" ಎನ್ನುವ ಉಗಾಭೋಗದಿಂದ, ಹರಿದಾಸರು ಕಾಲಿಗೆ ಗೆಜ್ಜೆಕಟ್ಟಿ ಕೈಯಲ್ಲಿ ತಾಳವನ್ನು ಹಿಡಿದಿರಬೇಕೆಂದು ವಿಧಿಸಿರುವರು. ಪಂಚಭೇದ ಜ್ಞಾನ ವಿಶಿಷ್ಟರಾಗಿ ಪಂಚ ರೂಪಾತ್ಮಕನಾದ ಶ್ರೀಹರಿಯ ಪಾದಪದ್ಮಗಳನ್ನು ತಮ್ಮ ಮನೋಮಂಚದಲ್ಲಿಟ್ಟು ಪೂಜಿ ಸುವ ಅಂತರ್ದೀಕ್ಷೆಯುಳ್ಳ ಎಲ್ಲ ಹರಿದಾಸರಿಗೆ, ತಂಬೂರಿ, ತಾಳ, ತುಳಸೀಮಣಿ, ಗೆಜ್ಜೆ, ಗೋಪಾಳ ಬುಟ್ಟಿ ಇವು ಐದು ಬಾಹ್ಯ ದೀಕ್ಷೆಗಳು. ತಲೆಗೆ ಕಾವೀ ವಸ್ತ್ರವನ್ನು ಸುತ್ತುವ ವಿಷಯದಲ್ಲಿ ದಾಸರ ವಚನವು ದೊರೆಯದೇ ಇದ್ದರೂ, ಈ ವ್ಯವಸ್ಥೆ ಅನಾದಿಯಿಂದ ಪ್ರಾಪ್ತವಾಗಿದೆ. ಕಾವೀ ವಸ್ತ್ರವು ವೈರಾಗ್ಯಕ್ಕೆ ಪ್ರತಿನಿಧಿ. ಹರಿದಾಸರೆಲ್ಲರೂ ಗೃಹಸ್ಥಾ ಶ್ರಮಿಗಳೇ ತಾವು ಗೃಹಸ್ಥಾಶ್ರಮಿಗಳಾದರೂ ತಮ್ಮ ಮತಿ ವೈರಾಗ್ಯಪೂರ್ಣವಾಗಿದೆ ಎಂದು ಸೂಚಿಸುವದಕ್ಕಾಗಿಯೇ ಈ ಕಾವೀವಸ್ತ್ರದ ಧಾರಣೆ. ಇಂತಹ ಬಾಹ್ಯದೀಕ್ಷೆ ಯಾವ ಪರಂಪರೆ ಯಲ್ಲೂ ಇಲ್ಲ. ಈ ದೀಕ್ಷಾ ಸ್ವೀಕಾರವು ಸಹ ಗುರುಗಳಿಂದಲೇ ಆಗಬೇಕು.ದಾಸ ದೀಕ್ಷೆಯನ್ನಿತ್ತ ಗುರುಗಳು, ಅಂಕಿತ ನಾಮವನ್ನು ಸಹ ಕರುಣಿಸುವರು.ಮುಂದೆ ಈ ಅಂಕಿತನಾಮದಿಂದಲೇ ಕೃತಿಗಳ ರಚನೆ ಪ್ರಾರಂಭವಾಗುವದು. ವ್ಯಾಸರಾಯರು ಪುರಂದರದಾಸರಿಗೆ ಗುರುಗಳು. ವ್ಯಾಸರುದಾಸರಿಗೆ ದಾಸದೀಕ್ಷೆಯನ್ನಿತ್ತು ಪುರಂದರವಿಠಲ ಎಂಬ ಅಂಕಿತನಾಮವನ್ನು ಕೊಟ್ಟು ಅನುಗ್ರಹಿಸಿದರು. ಅಂದಿನವರೆವಿಗೂ ಶ್ರೀನಿವಾಸನಾಯಕರೆಂದು ಪ್ರಸಿದ್ಧರಾದ ದಾಸರು, ಅಂಕಿತನಾಮ ಹೊಂದಿದ ನಂತರ ಪುರಂದರದಾಸರೆಂದು ಪ್ರಸಿದ್ಧರಾದರು. ಈ ಕರ್ನಾಟಕ ಹರಿದಾಸರ ಪರಂಪರೆಯಲ್ಲಿ, ವ್ಯಾಸರಾಯರು ವಾದಿರಾಜರು ಪ್ರಸನ್ನವೆಂಕಟದಾಸರು ಇವರೇ ಮೊದಲಾದ ಕೆಲ ಹರಿದಾಸರಿಗೆ, ಸಾಕ್ಷಾತ್ ಭಗವಂತನಿಂದಲೇ ದಾಸದೀಕ್ಷೆ ಅಂಕಿತ ನಾಮಗಳು ದೊರೆತರೆ, ವಿಜಯದಾಸರೆ ಮೊದಲಾದ ಕೆಲವರಿಗೆ ಇವು ಸ್ವಪ್ನದಲ್ಲಿ ಗುರು ಗಳಿಂದ ಸಂಪ್ರಾಪ್ತವಾಗಿವೆ. ಒಟ್ಟಾರೆ ಈ ಅಪೂರ್ವವಾದ ಸಂಪ್ರದಾಯ ಈ ಹರಿದಾಸ ಪರಂಪರೆಗೆ ಮೀಸಲಾಗಿದ್ದು, ಬಹಳ ಹಿಂದಿನಕಾಲದಿಂದಲೂ ನಡೆದುಕೊಂಡು ಬಂದಿದೆ.

ಇನ್ನು ದಾಸ ಸಾಹಿತ್ಯದ ವೈಶಿಷ್ಟ್ಯದ ಬಗ್ಗೆ ಹೇಳಬೇಕಾದಲ್ಲಿ ಇದೊಂದು ಅಪೂರ್ವ ಸಾಹಿತ್ಯ. ಗಹನವಾದ ವೇದಗಳ ನಿಜಾರ್ಥವನ್ನು ವಿವರಿಸಲು ಹೊರಹೊರಟ ವ್ಯಾಸ ಸಾಹಿತ್ಯ ಹಾಗೂ ಸಂಸ್ಕೃತ ದಾಸ ಸಾಹಿತ್ಯಗಳ ಮಾರ್ಗದಲ್ಲಿ ಮುನ್ನಡೆದ ಏಕೈಕ ಸಾಹಿತ್ಯ ವಾಗಿದೆ. ಶ್ರುತಿ, ಸ್ಮೃತಿ, ಪುರಾಣ, ತಂತ್ರಶಾಸ್ತ್ರ, ವೇದಾಂತ ಗ್ರಂಥಗಳಲ್ಲಡಕವಾದ ಅಪೂರ್ವಾರ್ಥಗಳನ್ನು, ಜನಸಾಮಾನ್ಯಕ್ಕೆ ಸಲಲಿತವಾದ ಕನ್ನಡ ಭಾಷೆಯಲ್ಲಿ ದೊರೆಯು ವಂತೆ ಮಾಡಿದ ಘನತೆ ಈ ಕನ್ನಡ ಹರಿದಾಸ ಸಾಹಿತ್ಯಕ್ಕೆ ಮೀಸಲಾದುದು.

ಚಕ್ರಾಬ್ಜಮಂಡಲ, ಭದ್ರಿಕಾಮಂಡಲ, ದೇವಪೂಜಾ ಪದ್ಧತಿ ಇವು ತಂತ್ರಶಾಸ್ತ್ರ ಗಳಲ್ಲಿ ಬರುವ ಗಹನವಾದ ವಿಷಯಗಳು. ಸಾಮಾನ್ಯವಾಗಿ ಪಂಡಿತರಿಗೂ ನಿಲುಕದ ವಿಷಯಗಳು. ಇಂಥಾ ಜಟಿಲವಾದ ಅಪೂರ್ವ ವಿಷಯಗಳನ್ನು ಹರಿದಾಸರು ಸುಂದರ ವಾಗಿ, ಸುಲಭವಾಗಿ, ಲಯಬದ್ಧವಾಗಿ ಹಾಡಿ ವಿವರಿಸಿರುವರು. ಇಂದಿಗೂ ಕನ್ನಡ ನಾಡಿನಲ್ಲಿ ಅನೇಕ ಮಹಿಳೆಯರು ತಮ್ಮ ತಮ್ಮ ಮನೆಗಳಲ್ಲಿ ಚಕ್ರಾಬ್ಜಮಂಡಲವನ್ನು ರಂಗ ವಲ್ಲಿ ರೂಪದಲ್ಲಿ ಚಿತ್ರಿಸುವರು. ಈ ವಿಷಯದಲ್ಲಿ ಹರಿದಾಸರ ಉಪಕಾರ ಚಿರಸ್ಮರಣೀಯ. ಶ್ರೀ ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಅನುವಾದದಿಂದ ಕೂಡಿದ ತಂತ್ರಸಾರ ಸಂಗ್ರಹದ ಪರಿಶಿಷ್ಟದಲ್ಲಿ, ಚಕ್ರಾಬ್ಜಮಂಡಲವನ್ನು ಕುರಿತು ವಿವರಿಸುತ್ತಾ, ಶ್ರೀ ವಿಜಯ ದಾಸರ ಉಪಕಾರವನ್ನು ಸ್ಮರಿಸಿರುವರು. ಹರಿದಾಸರ ಉಪಕಾರ ಈ ಚಕ್ರಾಬ್ಜಾದಿ ಮಂಡಲಗಳನ್ನು ಕೃತಿಗಳ ರೂಪದಲ್ಲಿ ವಿವರಿಸುವದರೊಟ್ಟಿಗೆ ಮುಗಿಯಲಿಲ್ಲ. ಜನ ಸಾಮಾನ್ಯರಿಗೆ ಈ ಮಂಡಲಗಳ ಪರಿಚಯವನ್ನು ಇನ್ನೂ ಸುಲಭ ರೀತಿಯಲ್ಲಿ ಮಾಡಿ ಕೊಡಲು, ಬೃಹದಾಕಾರದ ಚಿತ್ರಗಳನ್ನು ಸಹ ಬರೆದಿರುವರು. ಈ ಮಹತ್ಕಾರ್ಯವನ್ನು ಮೊಟ್ಟಮೊದಲು ಮಾಡಿದವರು ಶ್ರೀ ಗೋಪಾಲದಾಸರು. ವಿಜಯದಾಸಾದಿ ಪ್ರಾಚೀನ ಹರಿದಾಸರು ಬರೆದ ಚಿತ್ರಪಟಗಳು ನಮಗೆ ದೊರೆತಿಲ್ಲ. ಗೋಪಾಲದಾಸರ ನಂತರದಲ್ಲಿ, ಜಗನ್ನಾಥದಾಸರೇ ಮೊದಲಾದ ಅನೇಕ ಹರಿದಾಸರು, ಗಹನವಾದ ಅನೇಕ ವಿಷಯ ಗಳನ್ನು ಜನರಿಗೆ ಚಿತ್ರಗಳ ದ್ವಾರಾ ತಿಳಿಯ ಹೇಳಲು ಪ್ರಯತ್ನಿಸಿರುವರು.

ಉಪನಿಷತ್ತುಗಳ ಹಾಗೂ ಪುರಾಣ ರಹಸ್ಯಗಳನ್ನು ತಿಳಿಯ ಹೇಳುವಲ್ಲಿ ಹರಿ ದಾಸರ ಪ್ರಯತ್ನ ಪೂರ್ಣ ಫಲಕಾರಿಯಾಗಿದೆ. ಒಂದು ದೃಷ್ಟಿಯಲ್ಲಿ ಹರಿದಾಸರ ಕೃತಿ ಗಳು ಉಪನಿಷತ್ತಿನ ಭಾಷಾಂತರಗಳು ಎಂದಲ್ಲಿ ತಪ್ಪಾಗಲಾರದು. ಹರಿದಾಸರು ತಮ್ಮ ಕೆಲ ಕೃತಿಗಳಲ್ಲಿ ಒಂದು ಉಪನಿಷತ್ತನ್ನೋ ಅಥವಾ ಉಪನಿಷತ್ತಿನ ಒಂದು ಭಾಗವನ್ನೋ ಪೂರ್ಣವಾಗಿ ಅನುವದಿಸಿರುವದನ್ನು ಕಾಣಬಹುದು. "ದ್ವಾಸುಪರ್ಣಾಸಯುಜಾಸಖಾ ಯಾ" ಎನ್ನುವ ಶ್ರುತಿಯನ್ನು ಪುರಂದರದಾಸರು, "ಜಯವದೆ ಜಯವದೆ ಈ ಮನೆತನಕೆ- ಬಿಡುಬಿಡು ಬಿಡುಬಿಡು ಮನ ಸಂಶಯವ" ಎನ್ನುವ ಹಾಡಿನಲ್ಲಿ ಪೂರ್ಣವಾಗಿ ಅನುವದಿಸಿ ರುವರು. ಜಾನಪದ ಶೈಲಿಯಲ್ಲಿರುವ ಈ ಹಾಡು 'ಬುಡು ಬುಡಿಕೆ ಹಾಡು' ಎಂದು ಪ್ರಸಿದ್ಧವಾಗಿದೆ. ಆದಕಾರಣವೇ ಪುರಂದರದಾಸರ ಸಮಗ್ರ ಕೃತಿಗಳು ಪುರಂದರೋಪ ನಿಷತ್ತೆಂದೇ ಪ್ರತೀಯಾಗಿವೆ. ಶ್ರೀ ವಿಜಯದಾಸರ ಸಮಗ್ರ ಸುಳಾದಿಗಳು ಪೂರ್ಣ-ಉಪ ನಿಷದರ್ಥದಿಂದಲೇ ಕೂಡಿವೆ.

ಪ್ರತಿ ಮಾನವನು ತನ್ನನ್ನು ಹಾಗೂ ಬಾಹ್ಯ ಪ್ರಪಂಚವನ್ನು ಎರಡು ಸಂದರ್ಭಗಳಲ್ಲಿ ಮರೆಯುತ್ತಾನೆ. ಮೊದಲನೆಯ ವಿಸ್ಮೃತಿ ಅಧ್ಯಾತ್ಮಿಕ ಪ್ರಪಂಚದಲ್ಲಿ. ಎರಡನೆಯ ವಿಸ್ಮೃತಿ ಲೌಕಿಕ ಪ್ರಪಂಚದಲ್ಲಿ. ಜ್ಞಾನ-ಭಕ್ತಿ ವೈರಾಗ್ಯಗಳಿಂದ ಪೂರ್ಣನಾದ ಜೀವಿಯು ಆ ಭಗವಂತನ ಒಲುಮೆಯಿಂದ, ಹೃದಯಾಂತರ್ಯಾಮಿಯಾದ ತನ್ನ ಬಿಂಬದ ದರ್ಶನವನ್ನು ಪಡೆಯುವನು. ಇದೇ ಅಪರೋಕ್ಷ. ನಿರತಿಶಯಾನಂದದಾಯಕವಾದ ಆ ಸುಸಮಯದಲ್ಲಿ ಪ್ರತಿ ಜೀವಿಯೂ ತನ್ನನ್ನೂ ತನ್ನ ಸರ್ವಸ್ವವನ್ನೂ ಮರೆಯುವನು. ಇದರಂತೆ ದೈಹಿಕಾನಂದವನ್ನು ಣಿಸುವ ಲೈಂಗಿಕ ಪ್ರಕ್ರಿಯೆಯಲ್ಲೂ, ಎಲ್ಲರೂ ಎಲ್ಲವನ್ನೂ ಮರೆಯುವರು. ಮೊದಲನೆಯದು ಶಾಶ್ವತಾನಂದ. ಎರಡನೆಯದು ಕ್ಷಣಿಕಾನಂದ. ಒಂದು ಬಂಧಮೋಚಕ. ಮತ್ತೊಂದು ಬಂಧಕ. ಬಂಧಕವೆಂದ ಮಾತ್ರದಲ್ಲಿ ಯಾರೂ ಬಿಡುವಂತಿಲ್ಲ. ಆಶ್ರಯಗಳಲ್ಲಿ ಗೃಹಸ್ಥಾಶ್ರಮ ಅತ್ಯಂತ ಶ್ರೇಷ್ಠವಾದುದು. ಪ್ರಜೋತ್ಪತ್ತಿ ಅತ್ಯಾವಶ್ಯಕ. "ಇರಬೇಕು ಇದ್ದು ಜೈಸಬೇಕು" ಬಂಧಕವು ಬಂಧಮೋಚಕವಾಗಬೇಕು. ಪ್ರಾಣಾಂತಕವಾದ ವಿಷ ಪ್ರಾಣ ರಕ್ಷಣೆಗೆ ಉಪಕರಿಸುವಂತೆ. ವಿಶ್ವದ ಯಾವ ಸಾಹಿತ್ಯದಲ್ಲೂ ಇದಕ್ಕೆ ಬೇಕಾಗುವ ಉಪಾಯವನ್ನು ಸೂಚಿಸಿಲ್ಲ. ಅಂಧಕಾರ ಬಂಧುರವಾದ ಈ ಮಾರ್ಗದಲ್ಲಿ ಪ್ರಯಾಣಿಸುವ ಪ್ರತಿ ಜೀವಿಗೂ, ಕೇವಲ ವೈದಿಕ ಸಾಹಿತ್ಯವು ಮಾತ್ರ ಜ್ವಲಂತ ಕೈದೀಪವಾಗಿದೆ. ಬೃಹದಾರಣ್ಯ-ಛಾಂದೋಗ್ಯಗಳಲ್ಲಿ ಇದರ ಪ್ರಸ್ತಾಪವಿದೆ.

ಅನಿರುದ್ಧ ಶರೀರದಿಂದ ಯುಕ್ತನಾದ ಜೀವಿಯನ್ನು ಭಗವಂತನು ಆದಿಯಲ್ಲಿ ಆಕಾಶದಲ್ಲಿರಿಸುತ್ತಾನೆ. ನಂತರದಲ್ಲಿ ಮೇಘಮಂಡಲದಲ್ಲಿರಿಸಿ, ವೃಷ್ಟಿದ್ವಾರಾ ಭೂಮಿಯಲ್ಲಿ ಬೆಳೆಯುವ ಧಾನ್ಯಾದಿಗಳಲ್ಲಿಡುವನು. ಪುನಃ ಅಲ್ಲಿಂದ ಪುರುಷನ ತೇಜೋಮಯವಾದ ರೇತಸ್ಸಿನಲ್ಲಿ ಕೆಲವು ಕಾಲವಿಟ್ಟು, ಆ ಪುರುಷ ರೇತೋದ್ವಾರಾ ಸ್ತ್ರೀಗರ್ಭದಲ್ಲಿಡುವನು. ಜನಿಸುವ ಆ ಜೀವಿಗೆ ಮಾತೃಗರ್ಭದಲ್ಲಿ ಶ್ರೀಹರಿಯು ಅನಿರುದ್ಧಾದಿ ಪಂಚರೂಪಗಳಿಂದ ಸ್ಥೂಲ ಶರೀರವನ್ನು ಕರುಣಿಸುವನು. ಇಲ್ಲಿ ಗಗನ, ಮೇಘ, ಭೂಮಿ, ಪುರುಷ, ಸ್ತ್ರೀ ಇವೇ ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ಮರೆಯದೆ ಜೀವಿಯನ್ನು ದೇವತೆಗಳು ಶ್ರೀಹರಿಯಲ್ಲಿ ಹೋಮಿಸುವರು ಎಂದು ತಿಳಿಯುವ ಕ್ರಮಕ್ಕೆ "ಪಂಚ ಮಹಾಯಜ್ಞ"ವೆಂದು ಹೆಸರು.

ಲೌಕಿಕ ಸುಖಾನುಭವದಲ್ಲಿ ಪರಮೋತ್ತಮವಾದ ಆಧ್ಯಾತ್ಮಿಕ ಸುಖಾನುಭವದ ತಿರುಳನ್ನು ತಿಳಿಸಿಕೊಟ್ಟ ಉಪನಿಷತ್ತುಗಳು, ಲೈಂಗಿಕ ವ್ಯಾಪಾರವನ್ನು ಯಜ್ಞವನ್ನಾಗಿಸಿವೆ. ಈ ಅನುಸಂಧಾನದಿಂದ ಉತ್ತಮ ಪ್ರಜೋತ್ಪತ್ತಿ ಹಾಗೂ ಭಗವದನುಗ್ರಹ ಪ್ರಾಪ್ತಿ. ಇದೇ "ಕಾಯಕವೇ ಕೈಲಾಸ" ಎನ್ನುವ ನಾಣ್ಣುಡಿಗೆ ನಿರ್ವಚನ. ಈ ಅಪೂರ್ವವಾದ ಉಪನಿಷದ್ರಹಸ್ಯವನ್ನು ಕರ್ನಾಟಕ ಹರಿದಾಸರು ಕನ್ನಡೀಕರಿಸಿ ಸಮಾಜಕ್ಕೆ ಮಹದುಪಕಾರವನ್ನು ಮಾಡಿರುವರು. ಈ ಸಾಹಿತ್ಯವನ್ನುಳಿದು ಉಳಿದ ಯಾವ ಪ್ರಾಂತೀಯ ಸಾಹಿತ್ಯದಲ್ಲೂ ಈ ಅಪೂರ್ವ ವಿವರಣೆಯ ಘಟ್ಟವನ್ನು ಕಾಣಲಾರೆವು. ಇದು ಹರಿದಾಸ ಸಾಹಿತ್ಯದ ವೈಶಿಷ್ಟ್ಯ.

"ಏಷ ಚಿತ್ರ ಜಗದ್ಬಹುಧಾಕರಣಾತ್ ಪರಶಕ್ತಿರನಂತಗುಣಃ ಪರಮಃ" ಇದು ಆಚಾರ್ಯ ಮಧ್ವರ ಅಮೃತವಾಣಿ. ಚಿತ್ರವಿಚಿತ್ರವಾದ ರೀತಿಯಲ್ಲಿ ಅನಂತವಾಗಿ ಸೃಜಿಸ ಲ್ಪಟ್ಟ ಈ ವಿಶ್ವದ ಅರಿವು ಅತ್ಯಾವಶ್ಯಕ. ಇದರಿಂದ ಭಗವಂತನ ಶಕ್ತಿ ಸಾಮರ್ಥ್ಯಗಳ ತಿಳಿವಳಿಕೆಯುಂಟಾಗಿ, ಗುಣನಿಧಿಯಾದ ಅವನ ಸರ್ವೋತ್ತಮತ್ತ್ವವು ತಿಳಿದುಬರುವುದು. ಈ ಚರಾಚರಾತ್ಮಕವಾದ ಅನಂತ ವಿಶ್ವದ ಸೃಷ್ಟಿಕರ್ತನು ಆ ಶ್ರೀಹರಿಯೇ. ಅತ ಏವ ವೇದಗಳಲ್ಲಿ, ಪುರಾಣಗಳಲ್ಲಿ ವಿಸ್ತೃತವಾಗಿ ಸೃಷ್ಟಿಯ ರಹಸ್ಯವು ವಿವರಿಸಲ್ಪಟ್ಟಿದೆ. ಪುರಾಣ ಲಕ್ಷಣದಲ್ಲಿ ಸೃಷ್ಟಿಕ್ರಮದ ವರ್ಣನೆಯು ಪ್ರಥಮಸ್ಥಾನವನ್ನು ಆಕ್ರಮಿಸಿ ನಿಂತಿದೆ.

ವೇದವ್ಯಾಸರು ಸೃಷ್ಟಿಕ್ರಮವನ್ನು ಸಮಗ್ರವಾಗಿ ಒಂದೇ ಪುರಾಣದಲ್ಲಿ ಹೇಳದೆ, ಒಂದೊಂದು ಪುರಾಣದಲ್ಲಿ ಒಂದೊಂದು ಭಾಗವನ್ನು ವಿವರಿಸಿರುವರು. ಇವೆಲ್ಲವನ್ನು ಒಂದೆಡೆಗೆ ಸೇರಿಸಿದಾಗ ಮಾತ್ರ ಸಂಪೂರ್ಣ ಸೃಷ್ಟಿ ಪ್ರಕರಣವು ಸಿದ್ಧವಾಗುವದು. ಈ ಮಹತ್ಕಾರ್ಯವನ್ನು ಸಾಧಿಸಿದವರೆಂದರೆ ಕರ್ನಾಟಕ ಹರಿದಾಸರು, ಪಂಡಿತರಿಗೂ ಸಹ ಸೃಷ್ಟಿ ಪ್ರಕರಣವು ಕಬ್ಬಿಣದ ಕಡಲೆಯಾಗಿದೆ. ಹರಿದಾಸರು ಮಾತ್ರ ಈ ಕ್ಲಿಷ್ಟವಾದ ಪ್ರಕರಣವನ್ನು, ಕನ್ನಡದಲ್ಲಿ ಸುಲಭವಾಗಿ ಅರ್ಥವಾಗುವಂತೆ ಸುಂದರವಾಗಿ ಪದಸುಳಾದಿ ಗಳ ರೂಪದಲ್ಲಿ ರಚಿಸಿ, ಸಮಾಜಕ್ಕೆ ಹಂಚಿಕೊಟ್ಟಿರುವರು. ವಿಶ್ವದ ಮಧ್ಯದಲ್ಲಿದ್ದು ಜೀವನವನ್ನು ನಡೆಸಿರುವ ಪ್ರತಿ ಜೀವಿಗೆ ಇದರ ಜ್ಞಾನ ಅತ್ಯಾವಶ್ಯಕ. ಇಂದಿನ ವಿಜ್ಞಾನಿ ಗಳ ಪ್ರಯತ್ನವೆಲ್ಲವೂ ಇದಕ್ಕಾಗಿಯೇ ನಡೆದಿದೆ. ಈ ಮಹತ್ಕಾರ್ಯವನ್ನು ಸಾವಿರಾರು ವರ್ಷಗಳ ಹಿಂದೆಯೇ ತಮ್ಮ ಆತ್ಮಶಕ್ತಿಯಿಂದ ಸಾಧಿಸಿ, ಜಯಗಳಿಸಿದ ಕೀರ್ತಿ ಭಾರತೀಯ ಮಹರ್ಷಿಗಳಿಗೆ ಸೇರಿದ್ದು. ಇದನ್ನು ಸುಲಲಿತವಾಗಿ ಮಾಡಿ ಸಮಾಜಕ್ಕೆ ಒದಗಿಸಿಕೊಟ್ಟ ಘನತೆ, ಕರ್ನಾಟಕ ಹರಿದಾಸರಿಗೆ ಸೇರಿದೆ. ಇದು ಹರಿದಾಸ ಸಾಹಿತ್ಯದ ವೈಶಿಷ್ಟ್ಯ.

ಮತ್ತೊಂದು ಹರಿದಾಸ ಸಾಹಿತ್ಯದ ವೈಶಿಷ್ಟ್ಯವೆಂದರೆ, ಸಕಲ ತಾತ್ತ್ವಿಕ ದೇವತೆಗಳ ಪರಿಚಯ ಮಾಡಿಸಿಕೊಡುವಿಕೆ. ವೇದಗಳಲ್ಲಿ ವಿಷ್ಣು, ರುದ್ರ, ಬ್ರಹ್ಮ, ಇಂದ್ರ, ವಾಯು, ಅಗ್ನಿ, ಸೂರ್ಯ, ಯಮ ಮೊದಲಾದ ಸಕಲ ತತ್ತ್ವಾಧಿಪತಿಗಳ ವರ್ಣನೆ ಇದೆ. ಅಲ್ಲಿ ಆಯಾ ದೇವತೆಗಳ ಸ್ಥಾನ-ಮಾನ-ವ್ಯಾಪಾರ-ವ್ಯಾಪ್ತಿಗಳು ವರ್ಣಿತವಾಗಿವೆ. ಕಠಿಣದೆನಿಸಿರುವ ವೇದಗಳಿಗೆ ಸಂಬಂಧಿಸಿದ ಈ ದೇವತೆಗಳ ಅವತಾರ ಚರಿತ್ರೆಗಳು ಪುರಾಣಗಳಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಈ ರೀತಿ ಶ್ರುತಿ ಪುರಾಣಗಳಲ್ಲಿ ಕಾಣಿಸಿಕೊಳ್ಳುವ ಎಲ್ಲ ದೇವತೆಗಳ ಮಹಾಮಹಿಮೆಯನ್ನು ಹರಿದಾಸರು ಹೃದಯಂಗಮವಾಗಿ ತಮ್ಮ ಕೃತಿಗಳಲ್ಲಿ ಹಾಡಿ ದಾಹರು.

ವೈದಿಕ ಭೂಮಿಯೆನಿಸಿದ ಭಾರತದಲ್ಲಿ ಒಂದು ವಿಚಿತ್ರವಾದ ಸನ್ನಿವೇಶವನ್ನು ಕಾಣುವೆವು. ಶೈವ ಸಾಹಿತ್ಯದಲ್ಲಿ ವೈಷ್ಣವ ದೇವತೆಗಳ ವರ್ಣನೆಯಾಗಲಿ, ಉಪಾಸನೆ ಯಾಗಲಿ ಕಂಡು ಬರುವುದಿಲ್ಲ. ಅರ್ಥಾತ್ ಅಲ್ಲಿ ವಿಷ್ಣು, ಲಕ್ಷ್ಮೀ, ವಾಯು, ಗರುಡ, ಶೇಷ ಮುಂತಾದವರ ಉಪಾಸನೆಗೆ ಸ್ಥಾನವಿಲ್ಲ. ಇದನ್ನು ಸ್ಪಷ್ಟವಾಗಿ ವೀರಶೈವ ವಚನ ಸಾಹಿತ್ಯದಲ್ಲಿ ಕಾಣುವೆವು. ಇದರಂತೆ ಶ್ರೀ ವೈಷ್ಣವ ಸಾಹಿತ್ಯದಲ್ಲಿ ಶೈವ ಸಂಬಂಧಿ ದೇವತೆಗಳಿಗೆ ಸ್ಥಾನ-ಮಾನಗಳಿರುವುದಿಲ್ಲ. ಇಲ್ಲಿ ರುದ್ರ, ಪಾರ್ವತಿ, ವಿನಾಯಕ ಮುಂತಾ

ದವರ ವರ್ಣನೆ ಕಂಡುಬರುವುದಿಲ್ಲ. ತಾಳ್ಳಪಾಕ ಅನ್ನಮಾಚಾರ್ಯರ ಕೃತಿಗಳಲ್ಲಿ ಈ ಪರಿಸ್ಥಿತಿಯನ್ನು ಕಾಣಬಹುದು. ಕರ್ನಾಟಕ ಹರಿದಾಸರು ಮಾತ್ರ ತಾವು ನಂಬಿದ ದಾರಿಯಲ್ಲಿ ಸಕಲ ತಾತ್ವಿಕ ದೇವತೆಗಳನ್ನೂ ಸ್ತುತಿಸಿರುವರು. ದ್ವೈತಮತಾವಲಂಬಿಗಳಾದ ಹರಿದಾಸರು ವಿಷ್ಣುವನ್ನೇ ಸರ್ವೋತ್ತಮನನ್ನಾಗಿ ಅಂಗೀಕರಿಸಿದರೂ, ಉಳಿದ ಎಲ್ಲಾ ದೇವತೆಗಳನ್ನು ತಾರತಮ್ಯೋಕ್ತ ರೀತಿಯಲ್ಲಿ ಅನನ್ಯ ಸಾಮಾನ್ಯವಾಗಿ ನುತಿಸಿರುವರು. ಶ್ರುತಿ, ಸ್ಮೃತಿ, ಪುರಾಣ ಪ್ರತಿಪಾದ್ಯರಾದ ದೇವತೆಗಳನ್ನು ಅದೇ ಪಂಥದಲ್ಲಿ ವರ್ಣಿಸುತ್ತಾ ಅವರ ಸ್ವರೂಪ-ಅಂಶ-ಆವೇಶ-ಅವತಾರಾದಿಗಳನ್ನೂ-ವ್ಯಾಪಾರ-ವ್ಯಾಪ್ತಿಗಳನ್ನೂ ಕೂಲಂಕಷವಾಗಿ ವರ್ಣಿಸಿರುವರು. ಇದು ಹರಿದಾಸ ಸಾಹಿತ್ಯದ ವೈಶಿಷ್ಟ್ಯ.

ಇನ್ನು ಎಲ್ಲ ಪ್ರಾಂತದ ಸಾಧು-ಸಂತರು ಹಾಡಿ ಹೇಳಿದಂತೆ, ಹರಿದಾಸರು ಸಹ ಲೋಕ ಸಾಮಾನ್ಯವಾದ ನೀತಿ ಮಾರ್ಗವನ್ನು, ಧರ್ಮ ಸಂದೇಶವನ್ನು ಪೂರ್ಣವಾಗಿ ಹೇಳಿದ್ದಾರೆ. ಸಮಾಜದಲ್ಲಿರುವ ಲೋಪ-ದೋಷಗಳನ್ನು ಕನ್ನಡದ ಸರ್ವಜ್ಞ ಕವಿಯಂತೆ, ತೆಲುಗಿನ ವೇಮನನಂತ ನಿಶಿತವಾದ ತಮ್ಮ ಕೃತಿ ಖಡ್ಗಗಳಿಂದ ಕತ್ತರಿಸಿರುವರು. ಒಟ್ಟಿನಲ್ಲಿ ಹರಿದಾಸರು, ನೀತಿಯ ನುಡಿಗಟ್ಟಿನಿಂದ ಹಿಡಿದು, ಕೈವಲ್ಯ ಪ್ರಾಪ್ತಿಯವರೆಗಿನ ಎಲ್ಲ ವಿಧದ ಸಮಾಜೋಪಯುಕ್ತ ಭಾವನಾ ತರಂಗಗಳನ್ನು, ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿರುವರು. ಹರಿದಾಸರು ಹೇಳದ ಸಮಾಜೋಪಯುಕ್ತ ವಿಷಯವಿಲ್ಲವೆಂದಲ್ಲಿ ತಪ್ಪಾಗಲಾರದು.

## ದಾಸ ಪಂಥದಲ್ಲಿ ಗುರುಜಗನ್ನಾಥದಾಸರ ವ್ಯಕ್ತಿತ್ವ:

ಈ ರೀತಿ ತನ್ನದೇ ಆದ ಸ್ಥಾನಮಾನಗಳನ್ನು ಹೊಂದಿದ ಹರಿದಾಸರ ಪರಂಪರೆಯಲ್ಲಿ ಶ್ರೀ ಗುರು ಜಗನ್ನಾಥದಾಸರು ಮೂರನೇ ಯುಗದ ಕೊನೆಯ ಹಂತದಲ್ಲಿ ಬಾಳಿ ಬೆಳಗಿದವರು. ಹರಿದಾಸರ ಪರಂಪರೆಯಲ್ಲಿ ಮೂರು ಯುಗಗಳು ಗತಿಸಿ ಹೋಗಿವೆ. ನರಹರಿ ತೀರ್ಥರಿಂದ ಹಿಡಿದು ವಿಜಯದಾಸರವರೆಗೆ ಮೊದಲನೇ ಯುಗ. ವಿಜಯದಾಸರಿಂದ ಪ್ರಾಣೇಶದಾಸರವರೆಗೆ ಎರಡನೆಯ ಯುಗ. ಪ್ರಾಣೇಶದಾಸರ ನಂತರ ಸುಂದರ ವಿಠಲದಾಸರವರೆಗೆ ಮೂರನೇ ಯುಗ.

ಈ ಮೂರು ಯುಗಗಳಲ್ಲಿ ಹರಿದಾಸ ಸಾಹಿತ್ಯವನ್ನು ಎರಡು ವರ್ಗಕ್ಕೆ ಸೇರಿದ ಜ್ಞಾನಿಗಳು ಪೋಷಿಸಿಕೊಂಡು ಬಂದರು. ಮೊದಲನೆಯ ವರ್ಗ ಸನ್ಯಾಸಿ ವರ್ಗ. ಇದರಲ್ಲಿ ನರಹರಿತೀರ್ಥರಿಂದ ಹಿಡಿದು ವಿದ್ಯಾಪ್ರಸನ್ನತೀರ್ಥರವರೆಗೆ ಅನೇಕ ಯತಿಗಳು ಆಗಿ ಹೋಗಿರುವರು. ಇನ್ನು ಎರಡನೆಯದು ಗೃಹಸ್ಥಾಶ್ರಮಿಗಳ ವರ್ಗ. ಇದರಲ್ಲಿ ಪುರಂದರದಾಸರೇ ಮೊದಲಾದವರು ಬರುವರು. ಸನ್ಯಾಸಿಗಳು ಹಾಗೂ ಗೃಹಸ್ಥಾಶ್ರಮಿಗಳು ಸೇರಿ, ಈ ಹರಿದಾಸ ಸಾಹಿತ್ಯವನ್ನು ಅಂಕುರಾವಸ್ಥೆಯಿಂದ ಬೆಳಸಿಕೊಂಡು ಬಂದು, ಫಲಭರಿತವಾದ ಮಹಾವೃಕ್ಷವನ್ನಾಗಿಸಿದರು. ಈ ಎಲ್ಲಾ ಯತಿಗಳು ಸಂಸ್ಥಾನಾಧಿಪತಿಗಳಾಗಿದ್ದುಕೊಂಡು, ದ್ವೈತ ಸಿದ್ಧಾಂತ ಪ್ರತಿಷ್ಠಾಪನೆಗಾಗಿ, ತದುಪಯುಕ್ತ ವೇದಾಂತಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸುತ್ತಾ, ಮತ್ತೊಂದು ಕಡೆ

[illegible] ಜನಸಾಮಾನ್ಯರ ಉದ್ದಿಶ್ಯ ಕನ್ನಡದಲ್ಲಿ ಕೃತಿಗಳನ್ನು ರಚಿಸಿ, ದಾಸ ಸಾಹಿತ್ಯದ ಭಂಡಾಗಾರವನ್ನು ಬೆಳೆಸಿದರು. ಪುರಂದರದಾಸರೇ ಮೊದಲಾದ ಗೃಹಸ್ಥಾಶ್ರಮಿಗಳು, ಕೇವಲ ಕನ್ನಡದಲ್ಲಿ ಕೃತಿಗಳನ್ನು ರಚಿಸಿ, ದಾಸಸಾಹಿತ್ಯದ ಏಳಿಗೆಗಾಗಿಯೇ ಶ್ರಮಿಸಿದರು. ವಿದ್ಯಾ ಸಂಪತ್ತಿನಿಂದ ಕೂಡಿದ ಈ ಹರಿದಾಸರೆಲ್ಲರೂ ಸಂಸ್ಕೃತದಲ್ಲೂ ಪಂಡಿತರಾಗಿದ್ದರು. ಆದರೆ ದೈವ ಸಂಕಲ್ಪವೋ ಗೃಹಸ್ಥಾಶ್ರಮಿಗಳಾದ ಯಾವ ಹರಿದಾಸರೂ ಸಂಸ್ಕೃತದಲ್ಲಿ ಗ್ರಂಥಗಳನ್ನು ರಚಿಸಲಿಲ್ಲ.

ಇದಕ್ಕೆ ಭಿನ್ನವಾದ ರೀತಿಯಲ್ಲಿ ಶ್ರೀಗುರು ಜಗನ್ನಾಥದಾಸರ ಜೀವನ ಸಾಗಿದೆ. ಇವರು ಸಂಸ್ಕೃತದಲ್ಲಿ 30 ಗ್ರಂಥಗಳನ್ನೂ, 20 ಸ್ತೋತ್ರಗಳನ್ನೂ ರಚಿಸಿರುವರು. ಕನ್ನಡದಲ್ಲಿ ದಾಸಸಾಹಿತ್ಯಕ್ಕೆ ಕೊಡುಗೆಯಾಗಿ 200ಕ್ಕೂ ಮೇಲ್ಪಟ್ಟ ಪದ–ಪದ್ಯ–ಸುಳಾದಿ–ಉಗಾಭೋಗಗಳನ್ನು ರಚಿಸಿರುವರಲ್ಲದೆ, ರಾಘವೇಂದ್ರವಿಜಯ, ಲಕ್ಷ್ಮೀ ಹೃದಯ, ಶ್ರೀನಿವಾಸ ಕಲ್ಯಾಣ, ವೆಂಕಟೇಶ ಮಹಾತ್ಮೆ, ಧ್ರುವಚರಿತ್ರೆ, ದ್ರೌಪದಿ ವಸ್ತ್ರಾಪಹರಣ ಮುಂತಾದ ಮಹಾಕಾವ್ಯ, ಖಂಡಕಾವ್ಯಗಳನ್ನು ಸಹ ರಚಿಸಿರುವರು. ದಾಸಾಚಾರ್ಯರು ಉತ್ತಮ ಸಮಾಜ ಸುಧಾರಕರು.

ಇದೀಗ ಆಂಧ್ರಪ್ರದೇಶಕ್ಕೆ ಸೇರಿ ಆದವಾನಿ ತಾಲೂಕಿನಲ್ಲಿರುವ ಕೌತಾಳ ಗ್ರಾಮ [illegible] ಹಿಂದುಳಿದ ಜನಾಂಗದಲ್ಲಿ ಧರ್ಮ ಜಾಗ್ರತೆಯನ್ನುಂಟು ಮಾಡಿದರು. ಗ್ರಾಮದಲ್ಲಿ ತಮ್ಮನ್ನು ತಾವು ಮರೆತು, ಮದ್ಯ–ಮಾಂಸಾದಿಗಳ ಸೇವನೆಯಿಂದ ಅಜ್ಞಾನದ ಮಾರ್ಗದಲ್ಲಿ ಜೀವನವನ್ನು ನಡೆಸುತ್ತಿದ್ದ, ನೇಯಿಕಾರರ ಹಾಗೂ ಬೇಡರ ಜನಾಂಗದಲ್ಲಿ ಮರುಕ ತೋರಿದರು. ಗುರೂಪದೇಶದಿಂದ ಅವರ ಮನಸ್ಸುಗಳನ್ನು ಜಾಗ್ರತಗೊಳಿಸಿದರು. ಅವರ ದುರಭ್ಯಾಸಗಳನ್ನು ಹೋಗಲಾಡಿಸಿ, ವೈಷ್ಣವ ದೀಕ್ಷೆಯನ್ನಿತ್ತು, ಧರ್ಮೋಪದೇಶ ಮಾಡಿದರು. ಇಂದಿಗೂ ಗಜೇಂದ್ರಗಡವೇ ಮುಂತಾದ ಗ್ರಾಮಗಳಲ್ಲಿ, ದಾಸರ ಶಿಷ್ಯ ಪರಂಪರೆಗೆ ಸೇರಿದವರೆಂದು ಹೇಳಿಕೊಳ್ಳುವ ಅನೇಕ ನೇಯಿಕಾರರು, ಸದ್ಧರ್ಮಾಚರಣೆಯುಳ್ಳಿದ್ದು, ಸುಖಜೀವನವನ್ನು ನಡೆಸುತ್ತಿರುವರು. ಹರಿದಾಸ ಪಂಥದಲ್ಲಿ ಇಂಥ ಸಮಾಜ ಸುಧಾರಣೆಗೆ ನಾಂದಿ ಹಾಡಿದವರು ವ್ಯಾಸರಾಜರಾದರೆ, ಅದನ್ನು ಪೂರ್ಣ ಆಚರಣೆಯಲ್ಲಿ ತಂದ ಮಹಿತಾತ್ಮರು ಶ್ರೀವಾದಿರಾಜರು. ನಂತರದ ಹರಿದಾಸರೆಲ್ಲರೂ ಯಥಾಯೋಗ್ಯವಾಗಿ ಈ ಮಹತ್ಕಾರ್ಯವನ್ನು ಸಾಧಿಸಿರುವರು. ಅದೇ ಪಂಥದಲ್ಲಿ ನಡೆದ ಧೀಮಂತರು ಗುರು ಜಗನ್ನಾಥದಾಸರು.

**ದಾಸರ ಜೀವನ:**

19ನೇ ಶತಮಾನದ ಪ್ರಥಮಾರ್ಧ ಅನೇಕ ಪಂಡಿತರಿಂದಲೂ, ದಾಸಶ್ರೇಷ್ಠರಿಂದಲೂ ಪೂರ್ಣವಾಗಿತ್ತು. ಪ್ರಾಯಶಃ ಅಂದಿನ ಸಮಾಜದಲ್ಲಿ ಎಲ್ಲರೂ ಪಂಡಿತರೇ, ಸದಾಚಾರ ಸಂಪನ್ನರೇ, ಕೌಶಿಕ ಕ್ಷೇತ್ರವೆಂದು ಪ್ರಸಿದ್ಧವಾಗಿದ್ದ ಕೋಶಿಗಿ ಗ್ರಾಮ, ಕರಿವರದನ ಭಕ್ತರಿಂದ ಕೂಡಿ ತಪೋವನವಾಗಿತ್ತು. ಪ್ರಹ್ಲಾದಾವತಾರಿಗಳಾದ ಶ್ರೀಗುರು ರಾಘವೇಂದ್ರರ ದಿವ್ಯ ವೃಂದಾವನದಿಂದ ರಾರಾಜಿಸುವ ಮಂತ್ರಾಲಯ ಕ್ಷೇತ್ರಕ್ಕೆ ಸಮೀಪವರ್ತಿಯಾದುದು ಈ ಗ್ರಾಮ. ಪ್ರತಿ ಮನೆಯಲ್ಲೂ ವೇದಘೋಷಣೆ; ವೇದಾಂತದ ಚರ್ಚೆ; ವೇದ ವೇದ್ಯನ ಗುಣಗಾನ; ಸದಾಚಾರಕ್ಕೆ ತೌರೂರಾಗಿತ್ತು.

ಗ್ರಾಮದ ಮಧ್ಯದಲ್ಲಿ ಹನುಮಂತದೇವರ ದಿವ್ಯಭವ್ಯ ಮಂದಿರ. ಗ್ರಾಮದ ದಕ್ಷನಾಯಕರಾದ ಕೋಶಿಗಿ ದೊರೆಗಳ ನೇತೃತ್ವದಲ್ಲಿ, ಜಗತ್ಪ್ರಾಣನಿಗೆ ನಿತ್ಯದಲ್ಲೂ ವೈಭವಪೂರ್ಣವಾಗಿ ಸೇವಾದಿಗಳು ನಡೆಯುತ್ತಿದ್ದವು. ಸ್ವಾಮಿ ಸುತ್ತಮುತ್ತಲಿನ ಪ್ರಾಂತದಲ್ಲಿ ಕೋಶಿಗಿ ಹನುಮಪ್ಪನೆಂದೇ ಪ್ರಸಿದ್ಧನಾಗಿದ್ದ. ಆ ಕಾಲದಲ್ಲಿ ವರ್ಷಕ್ಕೊಮ್ಮೆ ನಡೆಯುವ ಸ್ವಾಮಿಯ ರಥೋತ್ಸವವು 'ಕೋಶಿಗೆ ಜಾತ್ರೆ' ಎಂದು ಪ್ರಸಿದ್ಧವಾಗಿತ್ತು.

ಈ ಪುಣ್ಯ ಭೂಮಿಯಲ್ಲಿ ವೆಂಕಟಗಿರಿಯಾಚಾರ್ಯರೆಂಬ ಮಹನೀಯರು ವಾಸಿಸುತ್ತಿದ್ದರು. ಈ ಮನೆತನದ ಪೂರ್ವಜರಲ್ಲಿ ಸುಪ್ರಸಿದ್ಧರು ಶ್ರೀ ಬಾಳಾಚಾರ್ಯರು. ಕೌಶಿಕ ಗೋತ್ರಜರಾದ ಬಾಳಾಚಾರ್ಯರು ಮೂಲತಃ ಧಾರವಾಡಕ್ಕೆ ಸೇರಿದವರು. ರಾಘವೇಂದ್ರಮಠದ ಶಿಷ್ಯರು. ಶ್ರೀ ಮಧ್ವಾಚಾರ್ಯರ ಮೂಲ ಸಂಸ್ಥಾನಾಧೀಶರೂ, ವಿದ್ಯಾಭಿಮಾನಿಗಳೂ, ಶಿಷ್ಯವತ್ಸಲರೂ ಆದ ಶ್ರೀ ಸುರೀಂದ್ರರು, ಬಾಳಾಚಾರ್ಯರ ಪಾಂಡಿತ್ಯಕ್ಕೆ ತಲೆದೂಗಿ, ಅವರನ್ನು ಬಿಳಿಶಾಲಿಯವರೆಂದು ಕರೆದು, ನಗಾರಿ, ಬೆಸುಮಣೆ, ತಲೆಕಟ್ಟು ಕಟ್ಟಿ ಪೂಜೆ ಮುಂತಾದ ವಿಶಿಷ್ಟ ಗೌರವಗಳನ್ನು ಕರುಣೆಯಿಂದ ದಯಪಾಲಿಸಿದರು. ಶ್ರೀಮಠದ ಮುಖ್ಯ ಶಿಷ್ಯರೂ, ಶ್ರೀ ಗುರು ರಾಘವೇಂದ್ರರ ಕೃಪೆಗೆ ಪಾತ್ರರೂ, ಆದ ದಿವಾನ್ ವೆಂಕಣ್ಣ ಪಂತ ಅವರು, ಆಚಾರ್ಯರಿಗೆ ತಮ್ಮ ಮಗಳಾದ ಕೋನಮ್ಮನನ್ನು ಕೊಟ್ಟು ಮದುವೆ ಮಾಡುತ್ತಾ, ಹೊಳಗುಂದಿ ಕೋಶಿಗಿ ಪ್ರಾಂತಗಳಲ್ಲಿ ಅನೇಕ ಭೂಮಿಗಳನ್ನು ದಾನ ಮಾಡಿದರು. ಇದರಿಂದ ಬಾಳಾಚಾರ್ಯರು ತಮ್ಮ ವಾಸವನ್ನು ಕೋಶಿಗಿಗೆ ವರ್ಗಾಯಿಸಿದರು. ಈ ಮಹಿತಾತ್ಮರ ಸದ್ವಂಶದಲ್ಲಿ ಬೆಳಗಿದವರೇ ಶ್ರೀ ವೆಂಕಟಗಿರಿಯಾಚಾರ್ಯರು. ವೆಂಕಟಗಿರಿ ಆಚಾರ್ಯರು ವೇದಾಂತವೇ ಮೂರ್ತೀಭವಿಸಿದಂತೆ ಇದ್ದರು. ನಿತ್ಯ ಪಾಠ ಪ್ರವಚನ ತತ್ಪರರಾದ ಆಚಾರ್ಯರು, ವಿದ್ಯಾರ್ಜನೆಗಾಗಿ ತಮ್ಮಲ್ಲಿಗೆ ಬಂದ ಅನೇಕ ವಿದ್ಯಾರ್ಥಿಗಳಿಗೆ ಅನ್ನವಿಟ್ಟು ವಿದ್ಯೆಯನ್ನು ಹೇಳಿಕೊಡುತ್ತಿದ್ದರು. ವೇದೋಕ್ತ ಷಟ್ಕರ್ಮಗಳನ್ನು ಸಕ್ರಮವಾಗಿ ನಿರ್ವಹಿಸುತ್ತಿದ್ದ ಆಚಾರ್ಯರಿಗೆ, ಸೀತಮ್ಮ ಎಂಬ ಸಹಧರ್ಮಚಾರಿಣಿ ಇದ್ದಳು.

ಸಕಲ ಧಾರ್ಮಿಕ ಭೋಗ–ಭಾಗ್ಯಗಳನ್ನನುಭವಿಸುತ್ತಿದ್ದ ಈ ಆದರ್ಶ ದಂಪತಿಗಳಿಗೆ, ಮಕ್ಕಳಿಲ್ಲವೆಂಬ ಚಿಂತೆ ಬಲವತ್ತರವಾಗಿತ್ತು. ಆ ಆದರ್ಶ ದಂಪತಿಗಳು ಉತ್ತಮ ಸಂತಾನ ಪ್ರಾಪ್ತಿಗಾಗಿ ಶ್ರೀ ರಾಘವೇಂದ್ರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ ಸಂತಾನ ಗೋಪಾಲಕೃಷ್ಣನನ್ನು ಬಹುಕಾಲ ಸೇವಿಸಿದರು. ಜಗದೊಡೆಯನ ಸೇವೆಯಿಂದ ದಂಪತಿಗಳ ದೇಹವು ಮನಸ್ಸೂ ಪವಿತ್ರವಾಯಿತು. ಹಿಂದಿನ ಎಲ್ಲಾ ಜ್ಞಾನಿಗಳ ಚರಿತ್ರೆಯಲ್ಲೂ, ಸಂತಾನ ಪ್ರಾಪ್ತಿಗಾಗಿ ಅವರ ಮಾತಾ–ಪಿತೃಗಳು ಸೇವೆ ಸಲ್ಲಿಸಿದಂತೆ ಕಂಡುಬರುವದು. ತ್ರಿಲೋಕ ಗುರುಗಳಾದ ಆನಂದತೀರ್ಥರ ಮಾತಾ–ಪಿತೃಗಳು, ಲೋಕೋದ್ಧಾರಕ ಮಗನಿಗಾಗಿ ಅನಂತೇಶ್ವರನಲ್ಲಿ 12 ವರ್ಷ ಸೇವೆ ಸಲ್ಲಿಸಿದಂತೆ ಮಧ್ವ ವಿಜಯದಲ್ಲಿ ಕಂಡುಬರುವದು. ಈ ಸೇವೆ ಜ್ಞಾನಿಗೆ ಜನ್ಮವೀಯಲಿರುವ ಮಾತಾ–ಪಿತೃಗಳ ತನು–ಮನ ಶುದ್ಧಿಗಾಗಿಯೇ ಹೊರತು ಪುತ್ರೋತ್ಪತ್ತಿಗೆ ಮಾತ್ರವಲ್ಲ. ಸಂತಾನ ಪ್ರಾಪ್ತಿಯೆನ್ನುವದು ಜೀವಿಯ ಹುಟ್ಟಿನೊಡನೆ, ಸತ್ಯ ಸಂಕಲ್ಪವಾದ ಭಗವಂತನಿಂದ ನಿರ್ಣಿತವಾದ ವಿಷಯವಾಗಿರುತ್ತದೆ. ಸುಂದರವಾಗಿ ನಿರ್ಮಿತವಾದ ದೇವಾಲಯು

ವಲ್ಲೆ, ದೇವತಾ ವಿಗ್ರಹದ ಪ್ರತಿಷ್ಠಾಪನಾಗಿವಾಗಿ ನಡೆಯುವ ನವಹ ಹೋಮಗಳಂತೆ ಈ ಸಂತತಿಗಾಗಿ ಎಲ್ಲ ಮಾತಾ-ಪಿತೃಗಳ ಸೇವೆ ಎಂದು ನಿರ್ಣಯಿಸಬೇಕು.

ದಂಪತಿಗಳ ಸೇವೆಯಿಂದ ಪ್ರೀತನಾದ ಭಗವಂತ ಇಭರಾಮಪುರದ ಅಪ್ಪಾ ಅವರಿಗೆ ಸೂಚನೆಯಿತ್ತ. ಶ್ರೀಶನ ಆಜ್ಞೆಗೆ ಬದ್ಧರಾದ ಇಭರಾಮಪುರದ ಅಪ್ಪಾ ಅವರು, ವೆಂಕಟಗಿರಿ ಆಚಾರ್ಯರಲ್ಲಿಗೆ ಬಂದರು. ಬಂದ ಅಪ್ಪಾ ಅವರಿಗೆ ವೆಂಕಟಗಿರಿ ಆಚಾರ್ಯರು ಸ್ವಾಗತವನ್ನು ಬಯಸಿದರು. ಆಚಾರ್ಯರಿಗೆ ಅಪ್ಪಾ ಅವರು ಬಾಯಾರಿಕೆ ಹಿಂದ ಬಳಲುವವನಿಗೆ ಜಲಾಶಯದಂತಾದರು. ಇಭರಾಮಪುರ ಮಂತ್ರಾಲಯಕ್ಕೆ ಬಹಳ ಹತ್ತಿರದ ಗ್ರಾಮ. ಅಪ್ಪಾ ಅವರು ಶ್ರೀಗುರು ರಾಜರ ಅಂತರಂಗ ಭಕ್ತರು. ಪಂಚ ಮುಖ ಪ್ರಾಣೇಶನ ಉಪಾಸಕರು. ಅವಧೂತ ರಂಗಯ್ಯನವರೇ ಅಪ್ಪಾರವರಾಗಿ ಅವತ ರಿಸಿದರೆಂದು ಹಿರಿಯರ ವಚನ. ಅವಧೂತ ರಂಗಯ್ಯನವರು ವಾದೀಂದ್ರರ ಸಮ ಕಾಲಿಕರು. ವಸುಧೇಂದ್ರರಿಂದ ಶ್ಲಾಘಿತರು. ಬ್ರಹ್ಮಚರ್ಯಾಶ್ರಮದಲ್ಲಿದ್ದ ಅವಧೂತ ಶಿರೋಮಣಿಗಳು. ಭವ್ಯವಾದ ಚೆನ್ನಕೇಶವ ದೇವಾಲಯವನ್ನು ಕೌತಾಳದಲ್ಲಿ ನಿರ್ಮಿಸಿ ರುವರು. ಇವರು ವೈಕುಂಠ ಯಾತ್ರೆಗೆ ಮುಂಚಿತವಾಗಿಯೇ, ತಮಗಾಗಿ ಮಂಟಪವನ್ನು ನಿರ್ಮಿಸಿಕೊಂಡು, ಶಿಷ್ಯರಿಗೆ ಹೇಳಿ ಬೃಂದಾವನಸ್ಥರಾಗಿರುವರು. ಈ ಬೃಂದಾವನದ ಸನ್ನಿಧಾನದಲ್ಲಿ ರಂಗಯ್ಯನವರ ಅಪೇಕ್ಷೆಯಂತೆ, ಶ್ರೀ ವಸುಧೇಂದ್ರರು ಮೂಲರಾಮ ನನ್ನು ಪೂಜಿಸಿರುವರು. ಇವರ ಬೃಂದಾವನ ಕರ್ನೂಲು ಜಿಲ್ಲಾ ಆದವಾನಿ ತಾಲೂಕು ಕೌತಾಳ ಗ್ರಾಮದಲ್ಲಿದೆ. ಅಪ್ಪಾ ಅವರು ಸ್ನಾನ ಮಾಡಿದ ನೀರು ಪರಿಮಳಮಯವಾಗಿ ರುತ್ತಿತ್ತಂತೆ. ಇದಕ್ಕಾಗಿಯೇ ಅಪ್ಪಾ ಅವರು "ಪರಿಮಳಾಚಾರ್ಯ"ರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಜಯೇಶ ವಿಠಲ ದಾಸರೆಂದು ಪ್ರಸಿದ್ಧರಾದ ದಿವಾನ್ ಅಪ್ಪಾ ಜಿ ವೆಂಕಟರಾಯರು, ಅಪ್ಪಾ ಅವರ ಶಿಷ್ಯರಲ್ಲಿ ಪ್ರಮುಖರು.

ಶ್ರೀ ಅಪ್ಪಾ ಅವರು ವೆಂಕಟಗಿರಿ ಆಚಾರ್ಯರ ಬಾಲ್ಯ ಸ್ನೇಹಿತರು. ಪರಸ್ಪರ ಒಬ್ಬರನ್ನೊಬ್ಬರು "ಅಣ್ಣಾ" ಎಂದು ಸಂಬೋಧಿಸಿಕೊಳ್ಳುತ್ತಿದ್ದರು. ಪೂಜೆಗೆ ಕುಳಿತ ಅಪ್ಪಾ ಅವರು, ಪ್ರಾಣೇಶನ ಪಂಚ ರೂಪಗಳನ್ನು ತಮ್ಮ ಮನೋಪಂಕಜದಲ್ಲಿ ಚಿಂತಿಸುತ್ತಾ, ದೇವರ ಪೆಟ್ಟಿಗೆಯಿಂದ ಒಂದು ಮುತ್ತನ್ನು ತೆಗೆದು, "ಆಚಾರ್ಯರೇ! ಸಮಾಜೋದ್ಧಾರಕನೂ, ಜ್ಞಾನಿಯೂ ಆದ ಮುತ್ತಿನಂತಹ ಮಗನು ನಿಮ್ಮ ವಂಶ ವನ್ನು ಬೆಳಗುವನು" ಎಂದು ಹೇಳಿ ಮುತ್ತನ್ನು ಆಚಾರ್ಯರ ಕೈಯಲ್ಲಿ ಹಾಕಿದರು. ಅಲ್ಲಿಯವರೆಗೂ ಹರಿಕಥಾಮೃತಸಾರ ಪಾರಾಯಣದಲ್ಲಿ ತಲ್ಲೀನರಾಗಿದ್ದ ವೆಂಕಟಗಿರಿ ಆಚಾರ್ಯರಿಗೆ, ಇಭರಾಮಪುರದ ಅಪ್ಪಾರವರ ಈ ಅನುಗ್ರಹ ಅಸದೃಶವಾದ ಆನಂದ ವನ್ನುಂಟು ಮಾಡಿತು. ಅವರ ಬಾಯಿಂದ ತಾವು ಪಾರಾಯಣ ಮಾಡುತ್ತಿದ್ದ ಹರಿ ಕಥಾಮೃತಸಾರದ–

"ಕಣಗಿವೆಯಿಂದದಲಿ ಕೈ ಪೈ| ತಿಣ್ಣಗೊದಗುವ ತೆರದಿ ಪಲ್ಗಳು|
ವಣ್ಣು ಫಲಗಳನಗೆದು ಜಿಹ್ವೆಗೆ ರಸವನೀವಂತೆ ||
ಪುಣ್ಯಫಲವೀವಂದದಲಿ ನುಡಿ| ವೆಣ್ಣೆ ನಾಣ್ಬಾಂಡದೊಳು ಲಕ್ಷ್ಮಣ
ನಣ್ಣನೊದಗುವ ಭಕ್ತರವಸರಕಮರಗಣ ಸಹಿತ ||"

ಎಂಬ ವದ್ಯವು ಆನಂದಾಶ್ರುಗಳೊಟ್ಟಿಗೆ ಗದ್ಗದಿತವಾದ ಕಂಠದಿಂದ ಹೊರಹೊಮ್ಮಿತು. ಅಪ್ಪಾ ಅವರು ಸಹ ಶ್ರೀಶನು ಸತ್ಪಾತ್ರರಲ್ಲಿ ತಮ್ಮ ದ್ವಾರಾ ತೋರಿದ ಅನುಗ್ರಹವನ್ನು ಸ್ಮರಿಸುತ್ತಾ ಅಷ್ಟೇ ಆನಂದಪರವಶರಾಗಿ,

"ವಾದವಗಳಡಿಗೆರೆಯ ಸಲಿಲವು| ತೋದು ಕೊಂಬೆಗಳುಬ್ಬಿ ಪುಷ್ಪ
ಸ್ವಾದು ಫಲವೀವಂದದಲಿ ಸರ್ವೇಶ್ವರನು ಜನರಾ||
ರಾಧನೆಯ ಕೈಕೊಂಡು ಬ್ರಹ್ಮ ಭವಾದಿಗಳ ನಾಮದಲಿ ಫಲವಿ
ತ್ತಾದರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ||"

ಎಂದು ಮನ ಉಬ್ಬಿ ಪ್ರತ್ಯುತ್ತರಿಸಿದರು.

ಮುಂದೆ ಕಥಾನಾಯಕರು ಶಾ|| ಶ|| 1758 (ಕ್ರಿ|| ಶ|| 1837) ದುರ್ಮುಖಿನಾಮ ಸಂವತ್ಸರ, ಮಾರ್ಗಶಿರ ಶುದ್ಧ ಪಂಚಮಿಯಂದು ಜನ್ಮತಾಳಿದರು. ಆಚಾರ್ಯರ ಮನೆಯಲ್ಲಿ ತೊಟ್ಟಿಲು ತೂಗಿತು. ವೆಂಕಟಗಿರಿ ಆಚಾರ್ಯರು ತಮ್ಮ ಮುದ್ದಾದ ಮಗುವಿಗೆ "ಸ್ವಾಮಿರಾಯ" (ಶ್ರೀನಿವಾಸ) ಎಂದು ನಾಮಕರಣ ಮಾಡಿದರು. ಮಗುವಾಗಿರುವಾಗಲೇ ಸ್ವಾಮಿರಾಯನಿಗೆ ತಾಯಿಯ ವಿಯೋಗ ಉಂಟಾಯಿತು. ಸ್ವಾಮಿರಾಯ ತಾಯಿತಾಯಿಯ ಮತ್ತು ತಂದೆ ತಾಯಿಯ ಲಾಲನೆಯಲ್ಲಿ ಮುದ್ದಾಗಿ ಬೆಳೆದನು. ತಾಯಿಯಿಲ್ಲದ ಕೂಸೆಂಬ ದೃಷ್ಟಿಯಿಂದ, ಇಬ್ಬರು ಅವ್ವನವರು ಸ್ವಾಮಿರಾಯನನ್ನು ಬಹು ಪ್ರೀತಿಯಿಂದ ಬೆಳೆಸಿದರು.

### ಗುರ್ವನುಗ್ರಹ ಪ್ರಾಪ್ತಿ:

ಸ್ವಾಮಿರಾಯನು ಸರ್ವರ ಲಾಲನೆಯಲ್ಲಿ ಬೆಳೆದು ಉಡಾಳನಾದ. ಸ್ವಾಮಿರಾಯಗೆ ಜ್ಞಾನಾರ್ಜನೆಯತ್ತ ಮನಸ್ಸು ಹರಿಯಲಿಲ್ಲ. ತಂದೆಗೆ ತಕ್ಕ ಮಗನೆನಿಸಲಿಲ್ಲ. ಸದಾ ಆಟ–ಪಾಟಗಳಲ್ಲಾ ಸಕ್ತನಾದನು. ಕೆಲವರು ಸ್ವಾಮಿರಾಯನನ್ನು ಕಂಡು ಪಂಡಿತಪುತ್ರನೆಂದು ಆಡಿಕೊಂಡರು. ಸ್ವಾಮಿರಾಯನಿಗೆ 14 ವರ್ಷ ತುಂಬುತ್ತಿರುವಂತೆ ವಿವಾಹವೂ ನಡೆಯಿತು. ಸ್ವಾಮಿರಾಯನ ಕೈಹಿಡಿದ ತುಲಸಿ ಇನ್ನು 8 ವರ್ಷ ತುಂಬದ ಹೆಣ್ಣು. ಪ್ರಪಂಚದ ಅರಿವಿಲ್ಲದ ತುಲಸಿ ತನ್ನ 10ನೇ ವಯಸ್ಸಿನಲ್ಲೇ ಇಹಲೋಕದ ಯಾತ್ರೆಯನ್ನು ಮುಗಿಸಿದಳು. ಉಡಾಳನಾಗಿದ್ದ ಸ್ವಾಮಿರಾಯಗೆ ಪತ್ನಿ ವಿಯೋಗವು ಯಾವ ತರಹದ ದುಃಖವನ್ನುಂಟು ಮಾಡಲಿಲ್ಲ. ಪೂರ್ವದಂತೆ ತನ್ನ ಪ್ರವೃತ್ತಿಯಲ್ಲೇ ಮುಂದುವರೆದ. ಸ್ವಾಮಿರಾಯ 18ನೇ ವಯಸ್ಸಿನಲ್ಲಿ ಕಾಲಿಡುತ್ತಿರಲು, ತಂದ ಬಲವಂತದಿಂದ ತಮ್ಮ ವಯಿದ್ದಿನ ಮಗನಿಗೆ 2ನೇ ವಿವಾಹವನ್ನು ಮಾಡಿದರು. ಸ್ವಾಮಿಯ ಕೈಹಿಡಿದ ಸಾಧ್ವಿ ಆದವಾನಿ ತ್ರಿವಿಕ್ರಮ ವಂಶ ಸಂಜಾತಳು.

ತ್ರಿವಿಕ್ರಮ ಮನೆತನ ಅಂದು ಯಾದವಗಿರಿ ಎಂದು ಪ್ರಸಿದ್ಧವಾದ ಆದವಾನಿಯಲ್ಲಿ ಹೆಸರಾಂತ ಮನೆತನವಾಗಿತ್ತು. ಈ ತ್ರಿವಿಕ್ರಮ ವಂಶದ ಮೂಲಪುರುಷರು ವೇದವ್ಯಾಸಾಚಾರ್ಯರು. ಇವರು ಯಾದವಗಿರಿಯ ಕ್ಷೇತ್ರ ಮೂರ್ತಿ ಎನಿಸಿದ ರಣಮಂಡಲ ಪ್ರಾಣೇಶನ ಪರಮಾನುಗ್ರಹಕ್ಕೆ ಪಾತ್ರರು. ಸ್ವಾಮಿಯೊಡನೆ ಪ್ರತ್ಯಕ್ಷ ಮಾತನಾಡಿದ ಭಾಗವತೋತ್ತಮರು. ಈ ಸದ್ವಂಶಾಕಾಶದಲ್ಲಿ ಬೆಳಗಿನಿಂತ ಕಾಂತಿಪುಂಜವೇ ಯಂಕಮ್ಮ.

ಮದುವೆಯಾದಾಗ ವೆಂಕಮ್ಮನ ವಯಸ್ಸು 8 ವರ್ಷವಾಗಿತ್ತು. ಇದು ಅಂದಿನ ಆಚಾರವೂ ಆಗಿತ್ತು. "ಅಷ್ಟವರ್ಷಾ ಭವೇತ್‌ಕನ್ಯಾ" ಎನ್ನುವದು ಶ್ರುತಿವಾಕ್ಯ.

ಈ ಎರಡನೇ ವಿವಾಹವು ಕೂಡ ಸ್ವಾಮಿರಾಯನ ಜೀವನದಲ್ಲಿ ಪರಿಣಾಮಕಾರಿ ಯಾಗಲಿಲ್ಲ. ಹಿಂದಿನಂತೆ ಸ್ವಾಮಿ ತನ್ನ ಉಡಾಳತನದಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದ. ಸ್ವಾಮಿಗೆ 24ನೇ ವಯಸ್ಸು. ಒಮ್ಮೆ ಇವರ ಉಡಾಳತೆಯನ್ನು ಕಂಡ ಒಬ್ಬ ಗೃಹಸ್ಥನು, "ನೀನು ನನ್ನ ಮಗನಾಗಿದ್ದಲ್ಲಿ ಸೀಳಿ ಹಾಕುತ್ತಿದ್ದೆ; ದೊಡ್ಡವರ ಮಗನೆನಿಸಿ ಅಡ್ಡ ಹಾದಿ ಹಿಡಿದಿ; ಪ್ರಹ್ಲಾದನ ಹೊಟ್ಟೆಯಲ್ಲಿ ವಿರೋಚನ ಹುಟ್ಟಿದಂತೆ, ಪೂತಾತ್ಮರಾದ ಆಚಾರ್ಯರ ಮಗನೆನಿಸಿ ಅವರ ಮನೋವ್ಯಥೆಗೆ ಕಾರಣನಾಗಿರುವಿ" ಎಂದು ದಂಡಿಸಿದನು. ಗೃಹಸ್ಥನ ಬೈಗಳು ಸ್ವಾಮಿರಾಯನಲ್ಲಿ ಸುಪ್ತವಾಗಿದ್ದ ಚೈತನ್ಯವನ್ನು ಬಡಿದೆಬ್ಬಿಸಿದವು. ಸ್ವಾಮಿರಾಯನಿಗೆ ತಾನು ಅಂಧಕಾರದಲ್ಲಿ ನಿಂತಿರುವಂತೆ ಭಾಸವಾಯಿತು. ಸುಜ್ಞಾನ ಸಂಪಾದನೆಗಾಗಿ ಅವನ ಮನ ಹಾತೊರೆಯಹತ್ತಿತು. ಬೈಗಳ ಮಧ್ಯದಲ್ಲಿ ಹೊರಳಿದ ಪ್ರಹ್ಲಾದ–ವಿರೋಚನ ಶಬ್ದಗಳು ಸ್ವಾಮಿರಾಯನ ಮನಸ್ಸಿನಲ್ಲಿ ಮತ್ತೆ ಮತ್ತೆ ಹಾದು ಹೋದವು. ಮನೆಯಲ್ಲಿ ಅಜ್ಜಿಯರು ಹೇಳುತ್ತಿದ್ದ–

"ಮಾನವ ಜನ್ಮ ದೊಡ್ಡದು ಇದ
ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ|| ||ಪ||
ಕಣ್ಣು ಕೈ ಕಾಲು ಕಿವಿ ನಾಲಿಗೆ ಇರಲಿಕ್ಕೆ
ಮಣ್ಣು ಮುಕ್ಕಿ ಹುಚ್ಚರಾಗುವರೆ!
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸವಿರುವರ ಖೋಡಿ|| ||1||
ಕಾಲನ ದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೇ
ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಹಾಳು ಸಂಸಾರದ ಸುಳಿಗೆ ಸಿಕ್ಕಲು ಬೇಡಿ|| ||2||
ಏನು ಕಾರಣ ಯದುಪತಿಯನು ಮರೆತಿರಿ
ಧನ ಧಾನ್ಯ ಪುತ್ರರು ಕಾಯುವರೇ
ಇನ್ನಾದರು ಏಕೋಭಾವದಿ ಭಜಿಸಿರೋ
ಚೆನ್ನ ಶ್ರೀ ಪುರಂದರ ವಿಠಲರಾಯನ||" ||3||

ಎನ್ನುವ ಪುರಂದರದಾಸರ ಪದ ಸ್ಮೃತಿಪಟಲದಲ್ಲಿ ಹಾದುಹೋಯಿತು. "ಹೌದು; ಮಾನವ ಜನ್ಮ ದೊಡ್ಡದು; ಸಾಧನೆಗೆ ಯೋಗ್ಯವಾದುದು; ಲೌಕಿಕದ ಆಶೆಯಿಂದ ವೈದಿಕ ಜನ್ಮ ಮರೆಯಬಾರದು; ಇಲ್ಲಿಯವರೆಗಿನ ಜೀವನ ವ್ಯರ್ಥವಾಯಿತು; ಭಗವಂತನ ದಯೆ ದೊರೆಯುವದು ಹೇಗೆ?" ಸ್ವಾಮಿಯ ಮನಸ್ಸು ಪರಿಪರಿಯಾಗಿ ಆಲೋಚಿಸಿತು. ಧರ್ಮದಿಂದ ಸ್ವಾಮಿ ತತ್ತರಿಸಿದ. ಹಿಂದೆಂದೂ ಕೇಳದ ಇದ್ದಾಗ್ಯೂ ತನಗೆ ತಾನಾಗಿಯೇ

"ಅಂಜಬ್ಯಾಡ ಬ್ಯಾಡೆಲೊ ಜೀವ ಭವ
ಭಂಜನ ಹರಿ ಶರಣರ ಕಾವ||

ಎಂಬ ಶ್ರೀದ ವಿಠಲರ ಹಾಡು ಹೃದಯಾಂತರಾಳದಿಂದ ಹೊರಹೊಮ್ಮಿತು. "ನಿಜ ಭಗವಂತ ಕರುಣಾಮಯ; ಪಶ್ಚಾತ್ತಾಪಕ್ಕಿಂತ ಮಿಗಿಲಾದ ಪ್ರಾಯಶ್ಚಿತ್ತವಿಲ್ಲ, ಗುರು ದ್ವಾರಾ ಅಪ್ಯಚ್ಯುತಪ್ರಸಾದಃ ಹರಿಯ ಕೃಪೆಗೆ ಗುರುವೇ ಮುಖ್ಯಕಾರಣ" ಎಂದು ಚಿಂತಿಸಿದ ಸ್ವಾಮಿರಾಯ. ಅತಿರೋಹಿತ ವಿಮಲ ವಿಜ್ಞಾನಿಗಳಾದ ವಾಯುದೇವರನ್ನೇ ಶರಣು ಹೊಂದಬೇಕೆಂದು ನಿಶ್ಚಯಿಸಿದನು.

ಸ್ವಗ್ರಾಮಕ್ಕೆ ಹತ್ತಿರದಲ್ಲಿರುವ "ಬುಡಮಲ ದೊಡ್ಡಿ" ಎಂಬ ಪವಿತ್ರ ನಿರ್ಜನ ಕ್ಷೇತ್ರವೇ ಸಾಧನೆಗೆ ಯೋಗ್ಯವಾದ ಸ್ಥಳವೆಂದು ನಿರ್ಧರಿಸಿ, ಯಾರಿಗೂ ಹೇಳದೆ ಪ್ರಯಾಣ ಬೆಳೆಸಿದ. ಕ್ಷೇತ್ರವನ್ನು ಸೇರಿ ಕಠಿಣವಾದ ಸೇವೆಯಿಂದ ದೇಹವನ್ನೂ, ಮನಸ್ಸನ್ನೂ ಪವಿತ್ರಗೊಳಿಸಿದ. ಜಗದ್ಗುರುಗಳಾದ ವಾಯುದೇವರ ಸೇವೆಯನ್ನು ಅನನ್ಯ ಮನಸ್ಕನಾಗಿ ಮಾಡಿದ. ಫಲಾಪೇಕ್ಷೆಯಿಂದ ಪ್ರಾರಂಭವಾದ ಸ್ವಾಮಿಯ ಸೇವೆಯು ನಿಷ್ಕಾಮನೆಯತ್ತ ಸಾಗಹತ್ತಿತು. ಸ್ವಾಮಿಯ ಸೇವೆಯಿಂದ ಪ್ರೀತರಾದರು ಗುರು ಪವಮಾನರು. ವಾಯುದೇವರು ಸ್ವಾಮಿರಾಯನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡರು. ಆತನ ನಾಲಿಗೆ ಮೇಲೆ ಬೀಜಾಕ್ಷರಗಳನ್ನು ಬರೆದರು. "ಮಂತ್ರಾಲಯದಿಂದ ರಾಘವೇಂದ್ರರು ಬಂದು ನಿನಗುಪದೇಶಿಸುವರು. ಇನ್ನು ಮನೆಗೆ ನಡೆ" ಎಂದು ಆದೇಶಿಸಿದರು.

ವಾಯುದೇವರ ಆದೇಶವನ್ನು ಶಿರಸಾಧರಿಸಿ, ಗುರುರಾಘವೇಂದ್ರರ ಅನುಗ್ರಹವನ್ನು ಬಯಸಿ, ಸ್ವಾಮಿರಾಯನು ಊರನ್ನು ಸೇರಿದ. ನಿರ್ಮಲ ಮನಸ್ಕನಾಗಿ, ಹೊಸ ತೇಜಸ್ಸಿನಿಂದ ಬಂದ ಮಗನನ್ನು ಕಂಡ ವೆಂಕಟಗಿರಿಯಾಚಾರ್ಯರಿಗೆ ಆನಂದವಾಯಿತು. ಶಾ|| ಶ|| 1782 (ಕ್ರಿ. ಶ. 1861) ರೌದ್ರಿ ನಾಮ ಸಂವತ್ಸರ ಶ್ರಾವಣ ಶುದ್ಧದ ವರಮಹಾಲಕ್ಷ್ಮೀ ದಿನದಂದು, ಮಂತ್ರಾಲಯ ಮಹಾಪ್ರಭುಗಳು ತೇಜೋರೂಪದಿಂದ ಸ್ವಾಮಿರಾಯನ ಮನೆಯನ್ನೂ, ಮನಸ್ಸನ್ನೂ ಪ್ರವೇಶಿಸಿದರು. ಸ್ವಾಮಿರಾಯನಿಗೆ ಅದೇ ದಿನ ರಾತ್ರಿ ಸ್ವಪ್ನದಲ್ಲಿ ಇಭರಾಮಪುರದ ಅಪ್ಪರವರ ಸಮಕ್ಷಮದಲ್ಲಿ ಶ್ರೀ ಗುರುರಾಜರು ಪಾಠ ಹೇಳಿದಂತಾಯಿತು. ಸ್ವಾಮಿರಾಯನು ಎಲ್ಲೂ ಓದಲಿಲ್ಲ; ಎಂದೂ ಬರೆಯಲಿಲ್ಲ. ಕೇವಲ ಗುರುರಾಜರ ದಿವ್ಯ ಮಂಗಳಮೂರ್ತಿಯನ್ನು ತನ್ನ ಹೃದಯ ಫಲಕದಲ್ಲಿ ಬರೆದನು. ಗುರ್ವಂತರ್ಯಾಮಿ ಪ್ರಾಣೇಶನ ಗುಣಗಳನ್ನು ಓದಿದನು. ವರಕವಿಯಾದ; ಮಹಾಜ್ಞಾನಿ ಎನಿಸಿದ; ಶ್ರುತಿ ಸ್ಮೃತಿ ಪುರಾಣ ರಹಸ್ಯಗಳು ತಾವಾಗಿಯೇ ಹೊಳೆದವು. ಅಂದಿನಿಂದ ಸ್ವಾಮಿರಾಯನು-ಸ್ವಾಮಿರಾಯಾಚಾರ್ಯನಾದ; ಕೋಶಿಗಿ ಆಚಾರ್ಯನಾದ. ಸ್ವತಃ ಆಚಾರ್ಯರೇ ತಾವು ರಚಿಸಿದ ರಾಘವೇಂದ್ರ ವಿಜಯದ ಆದಿಯಲ್ಲಿ ಈ ವಿಷಯವನ್ನು ಸ್ಪಷ್ಟಪಡಿಸಿರುವರು.

"ವೇದಶಾಸ್ತ್ರಪುರಾಣ ಕಥೆಗಳ| ಓದಿಕೇಳ್ದವನಲ್ಲ ತತ್ತ್ವದ|
ಹಾದಿ ತಿಳಿದವನಲ್ಲ ಬುಧಜನ ಸಂಗವೊದಲಿಲ್ಲ||
ಮೋದತೀರ್ಥಪದಾಬ್ಜ ಮಧುಕರ|ರಾದ ಶ್ರೀಗುರು ರಾಘವೇಂದ್ರರ|
ಪಾದಪದ್ಮ ಪರಾಗ ಲೇಶದ ಸ್ಪರ್ಶಮಾತ್ರದಲಿ||

ಕೃತಿಯುಮಾಡುವ ಶಕುತಿ ಪುಟ್ಟಿತು। ಮತಿಯಮಾಂದ್ಯವು ತಾನೆಪ್ಪೋಯಿತು।
ಯತನವಿಲ್ಲದೆ ಸಕಲ ಶ್ರುತಿಸ್ಮೃತ್ಯರ್ಥ ತಿಳಿದಿಹದೋ॥"

"ದಶಪೂರ್ವಾನ್ ದಶೋತ್ತರಾನ್ ಬ್ರಾಹ್ಮೀಪುತ್ರೋ ಬ್ರಾಹ್ಮೀಪುತಃ" ಎಂಬ ಗೌತಮರ ಧರ್ಮ ಸೂತ್ರವು, ವೆಂಕಟಗಿರಿ ಆಚಾರ್ಯರ ಮನೆತನದ ವಿಷಯದಲ್ಲಿ ಸಾರ್ಥಕವಾಯಿತು. ಪೂತಾತ್ಮರಾದ ಆಚಾರ್ಯರನ್ನು ಪಡೆದು ಪುನೀತವಾಯಿತು ವೆಂಕಟಗಿರಿಯಾಚಾರ್ಯರ ವಂಶ. ಗುರುರಾಜರ ಅನುಗ್ರಹಕ್ಕೆ ಪಾತ್ರರಾದ ಆಚಾರ್ಯರು, ಮರುದಿನ ಪ್ರಾತಃ ಕಾಲದಲ್ಲಿ ತಂದೆಗಳ ಬಳಿಸಾರಿ, ಭಾಗವತವನ್ನು ಹೇಳಲು ಅನುಮತಿ ಬೇಡಿದರು. ವೆಂಕಟಗಿರಿರಾಯಾಚಾರ್ಯರಿಗೆ ಮಗನ ಮಾತಿನಿಂದ ಆಶ್ಚರ್ಯವಾಯಿತು. ತಮ್ಮ ಮಗನಿಗೆ ಸಂಸ್ಕೃತ ಭಾಷೆಯ ಪರಿಚಯವೇ ಇಲ್ಲ. "ಪಂಡಿತಾನಾಂ ಭಾಗವತೇ ಪರೀಕ್ಷಾ" ಎಂಬ ಆರ್ಯೋಕ್ತಿಯಂತೆ, ಪಂಡಿತರಿಗೂ ಅನುವದಿಸಲು ಅಸಾಧ್ಯವಾದ ಭಾಗವತವೆಲ್ಲಿ, ಒಂದೂ ಅರಿಯದ ತಮ್ಮ ಮಗನೆಲ್ಲಿ. ಗುರುರಾಜರನ್ನು ಸ್ಮರಿಸಿ ಭಾಗವತಾನುವಾದಕ್ಕೆ ಮಗನಿಗೆ ಅನುಮತಿ ನೀಡಿದರು. "ಕಿಮಲಭ್ಯಂ ಪ್ರಸನ್ನೇ ಶ್ರೀನಿಕೇತನೇ." ಭಗವಂತನ ಅನುಗ್ರಹವಾಗಲು ಯಾವುದು ತಾನೆ ಅಸಾಧ್ಯ. ಆಚಾರ್ಯರ ನಾಲಿಗೆಯ ಮೇಲೆ ವಾಗ್ದೇವಿಯು ನಲಿದಳು. ಭಾಗವತಾನುವಾದವು ಪ್ರಾರಂಭವಾಯಿತು. ಮಗನ ಮುಖದಿಂದ ಹೊರಹೊರಟ ಭಾಗವತ ಆದ್ಯಪದ್ಯ ವಿವರಣೆಯು ಗಿರಿಯಾಚಾರ್ಯರನ್ನು ಆನಂದಸಾಗರದಲ್ಲಿ ಮುಳುಗಿಸಿತು. ಆಚಾರ್ಯರು "ಜನ್ಮಾದ್ಯಸ್ಯ" ಎನ್ನುವ ಮಂಗಳ ಪದ್ಯವನ್ನು ಮೂರು ತಿಂಗಳುಗಳಕಾಲ ಅನುಪದಿಸಿದರಂತೆ.

ಆಚಾರ್ಯರಿಗೆ ಒಲಿದ ಗುರುರಾಜರು, ಅವರ ದೇವರ ಮನೆಯ ಮಣೆಯ ಮೇಲೆ ಚಿತ್ರರೂಪದಲ್ಲಿ ಕಾಣಿಸಿಕೊಂಡರು. ಆಚಾರ್ಯರು ಪಂಚಲೋಹದ ಬೃಂದಾವನವನ್ನು ಮಾಡಿಸಿ, ಅದರಲ್ಲಿ ಆ ಮಣೆಯನ್ನಿಟ್ಟು, ಮೃತ್ತಿಕೆಯನ್ನು ತುಂಬಿಸಿ ಪೂಜಿಸಿದರು. ಮುಂದೆ ಆಚಾರ್ಯರು ಶ್ರೀಗುರುರಾಜರ ಪ್ರೇರಣೆಯಂತೆ, ಗೋಪಾಲದಾಸರ ವಂಶೀಕರಾದ ಶ್ರೀಕೃಷ್ಣದಾಸರಿಂದ (ನೆಂಟಪೆತ್ತತಂದೆ ಗೋಪಾಲವಿಠಲರು) "ಗುರುಜಗನ್ನಾಥ ವಿಠಲ" ಎಂಬ ಅಂಕಿತ ಪಡೆದು, ಅಪರೋಕ್ಷ ಜ್ಞಾನಿಗಳಾದರು. ಪಂಡಿತವರ್ಗದ ಮಧ್ಯದಲ್ಲಿ ಕೋಶಿಗಿ ಆಚಾರ್ಯರೆಂತಲೂ, ದಾಸಸಾಹಿತ್ಯಾಭಿಮಾನಿಗಳ ಮಧ್ಯದಲ್ಲಿ "ಗುರುಜಗನ್ನಾಥದಾಸ"ರೆಂತಲೂ ಪ್ರಸಿದ್ಧರಾದರು. ನಿರಂತರ ಆಚಾರ್ಯರ ಗ್ರಂಥಗಳ ಅವಲೋಕನೆ, ಪಾಠ-ಪ್ರವಚನ, ಭಗವದಾರಾಧನೆ, ಜ್ಞಾನಿಗಳ ಸೇವೆ, ಪಿತೃ ಸೇವೆ, ಗ್ರಂಥಗಳ ರಚನೆ ಇವುಗಳೇ ದಾಸರ ನಿತ್ಯ ಕಾರ್ಯಕಲಾಪಗಳು. ಕೆಲವು ವರ್ಷಗಳ ನಂತರ ದಾಸರಿಗೆ ಪಿತೃ ವಿಯೋಗ ಉಂಟಾಯಿತು. ವೃದ್ಧರಾದ ತಂದೆಗಳ ಸೇವೆಗಾಗಿಯೇ ಅಲ್ಲಿಯವರೆಗೆ ಸ್ವಗ್ರಾಮದಲ್ಲಿ ನಿಂತಿದ್ದ ದಾಸರು, ಊರು ಬಿಡಲು ಸಿದ್ಧರಾದರು. ಸರ್ವವನ್ನು ಸರ್ವೇಶನಿಗರ್ಪಿಸಿದ ದಾಸರು, ಗುರುಮಹಿಮೆಯನ್ನು ತದ್ವಾರಾ ಹರಿಯ ಮಹಿಮೆಯನ್ನು ಸಕಲ ಸಾತ್ವಿಕ ಜನರಿಗೆ ತಿಳಿಸಲೋಸುಗ ದೇಶಸಂಚಾರಕ್ಕೆ ಹೊರಟರು.

**ದಾಸರ ದೇಶ ಸಂಚಾರ:**

ಕಾಟಾಪುರ ಮಹಾಸಂಸ್ಥಾನ. ಸಂಸ್ಥಾನಾಧಿಪತಿಗಳು ವೆಂಕಪ್ಪಯ್ಯನವರು. ಅರವತ್ತು ಹಳ್ಳಿಗಳಿಗೆ ಜಹಗೀರುದಾರರು. ಕರದೀಪ, ಶ್ವೇತಚ್ಛತ್ರ ಮುಂತಾದ ಬಿರಿದು

ಬಾವಲಿಗಳುಳ್ಳವರು. ದಾಸರು ಸಂಚಾರ ಮಾಡುತ್ತ ಕಾಟಾಪುರಕ್ಕೆ ಬಂದರು. ದೇಸಾಯರು ದಾಸರ ತೇಜಸ್ಸಿನಿಂದ ಪ್ರಭಾವಿತರಾದರು. ದಾಸರನ್ನು ತಮ್ಮ ಮನೆಯ ಗುರುಗಳನ್ನಾಗಿ ಮಾಡಿಕೊಂಡರು. ಹರಿಚಿತ್ತವನ್ನರಿತ ದಾಸಾರ್ಯರು, ಸುಖಪ್ರಾರಬ್ಧವನ್ನನುಭವಿಸಿ ಮುಗಿಸಲು, ದೇಸಾಯರ ಅಪೂರ್ವ ಆದರಾತಿಥ್ಯಗಳಲ್ಲಿ ಜ್ಞಾನ ಕಾರ್ಯವನ್ನು ಮಾಡುತ್ತಾ ಕಾಲಕಳೆದರು. ಆ ಸಮಯದಲ್ಲಿ ದಾಸರ ಬಳಿಯಲ್ಲಿ 60 ಜನ ವಿದ್ಯಾರ್ಥಿಗಳಿದ್ದರಂತೆ. ಸಹಧರ್ಮಚಾರಿಣಿ ಯಂಕಮ್ಮ ಎಲ್ಲರನ್ನು ತನ್ನ ಮಕ್ಕಳಂತೆ ಕಾಣುತ್ತಾ, ವಿದ್ಯಾರ್ಥಿಗಳ ಆಲನೆ-ಪಾಲನೆಯಲ್ಲೂ, ಪತಿ ಸೇವಯಲ್ಲೂ, ಕಾಲಕಳೆಯುತ್ತಾ, ನಿತ್ಯ 32 ಸಂಧಿ ಹರಿಕಥಾಮೃತಸಾರವನ್ನು ಈ ಸಮಯದಲ್ಲಿ ಹೇಳಿ ಮುಗಿಸುತ್ತಿದ್ದಳಂತೆ.

"ಜನನಿ ಪಿತ ಭೂಪಾರಿದಾಂಬರ। ಪನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ॥
ನೆನೆದು ದಿವಸಗಳೆಂಬ ಸಮಿಧೆಗ।ಳನು ನಿರಂತರ ಹೋಮಿಸುತ ಪಾ-
ವನಕೆ ಪಾವನನೆನಿಪ ಪರಮನ ಬೇಡು ಪರಮಸುಖ॥"

ಇದು ಜಗನ್ನಾಥದಾಸರ ಸಂದೇಶ. ಪಂಚಾಗ್ನಿಹೋತ್ರದ ಮರ್ಮವನ್ನರಿತ ದಾಸಾರ್ಯರಿಗೆ ಕಾಟಾಪುರದಲ್ಲಿರುವಾಗಲೇ ಒಂದು ಗಂಡು ಮಗುವಾಯಿತು. ಪಂಚಮಹಾಯಜ್ಞ ಫಲದಂತೆ ಉದಿಸಿದ ಸುಂದರಾಂಗನಾದ ಮಗುವಿಗೆ ರಾಮಚಂದ್ರನೆಂದು ಹೆಸರಿಟ್ಟರು. ವರ್ಷ ತುಂಬಿದ ರಾಮಚಂದ್ರ ತನ್ನ ತೊದಲು ನುಡಿಗಳಲ್ಲಿ ಸದಾ "ಹರೇರಾಮ ಹರೇರಾಮ ರಾಮ ರಾಮ ಹರೇ ಹರೇ॥ ಹರೇಕೃಷ್ಣ ಹರೇಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ" ಎಂದು ನುಡಿಯುತ್ತಾ, ಎಲ್ಲರ ಮನಸ್ಸಿಗೂ ಆಹ್ಲಾದ ಉಂಟು ಮಾಡಿದನು. ಯಂಕಮ್ಮನಿಗಂತೂ ಎಲ್ಲಿಲ್ಲದ ಆನಂದ. ಯಂಕಮ್ಮನ ಪುತ್ರ ವಾತ್ಸಲ್ಯತೆಯನ್ನು ಕಂಡ ದಾಸರು ಒಮ್ಮೆ, "ಯಂಕೂ! ಅತಿ ಸರ್ವತ್ರ ವರ್ಜಯೇತ್." ಭಗವಂತನಿಂದ ಭಿನ್ನವಾದ ಪದಾರ್ಥಗಳಲ್ಲಿ ಪ್ರೇಮಾಭಿಮಾನವನ್ನು ಅತಿಯಾಗಿ ಬೆಳೆಸಬಾರದು. ನಮ್ಮ ಪ್ರೇಮ ಅಭಿಮಾನಗಳು ಆತ್ಮ ಬಂಧುವಾದ ಪರಾತ್ಪರನಿಗೆ ಮೀಸಲಾಗಬೇಕು.

"ಮಕ್ಕಳಾ ಸುವಾಗ ಮಡದಿಯೊ।ಳಕ್ಕರದಿ ನಲಿವಾಗ ಹಯ ವ।
ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ।
ಬಿಕ್ಕುವಾಗಾ ಕಳಿಸುತಲಿ ದೇ।ವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕನೆಮದೂತರಿಗೆ ಆವಾದಲ್ಲಿ ನೋಡಿದರು॥"

ಈ ನುಡಿಯಲ್ಲಿರುವ ನಮ್ಮ ಮಾನವಿರಾಯರ ಹೃದ್ಗತಭಾವವನ್ನು ತಿಳಿದಿರುವಿಯಾ? ಮಕ್ಕಳ ಲಾಲನೆ-ಪಾಲನೆಗೆ ಮಮಕಾರವೇ ಕಾರಣವಾಗುವದು. ಈ ಮಮಕಾರ ಬಂಧನಕ್ಕೆ ಕಾರಣ. ಹಾಗಲ್ಲವೆ ಪುತ್ರನಲ್ಲಿ ಪುತ್ರಶಬ್ದ ವಾಚ್ಯನಾದ ಭಗವಂತನನ್ನು ಸ್ಮರಿಸುತ್ತಾ, ಆ ನಿಜವಾದ ಬಂಧುವಿನಲ್ಲಿ ಬಾಂಧವ್ಯವನ್ನು ಬೆಳಸಿಕೊಂಡಲ್ಲಿ, ಎಲ್ಲಾ ಬಂಧನಗಳು ದೂರಾಗುವವು. ಭಗವಂತನಿಂದ ಕರುಣಿಸಲ್ಪಟ್ಟ ಈ ಸಂಸಾರ ಅವನ ಉಪಾಸನೆಗೆ ಕಾರಣವಾಗಬೇಕು. ಹಾಗಲ್ಲವೆ ಪುನ್ನಾಮ ನರಕದಿಂದ ಕಾಪಾಡುವ ನಿಜವಾದ ಪುತ್ರ ಶಬ್ದವಾಚ್ಯನಾದ ಭಗವಂತನನ್ನು ಮರೆತು, ಈ ಲೌಕಿಕ ಪುತ್ರರಲ್ಲಿ ಆಶಾ

ಪಾಶಾದಿಗಳನ್ನು ಬೆಳೆಸಿದಲ್ಲಿ, ಒಮ್ಮೆ ದುಃಖಕ್ಕೂ ಕಾರಣವಾಗಲು ಸಾಧ ಮಗ ರಾಮನ ಅಂತರ್ಯಾಮಿಯಾದ ರಮಾರಮಣನಲ್ಲಿ ಮನವಿರಿಸು. ಆ ಮಮತೆ ಬೆಳೆಸು.

ಹಾನಿ ವೃದ್ಧಿ ಜಯಾಪಜಯಗಳು। ಏನು ಕೊಟ್ಟುದು ಭುಂಜಿ
ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ॥
ಜ್ಞಾನ ಸುಖಮಯ ತನ್ನವರ ಪರಮಾನುರಾಗದಿ ಪಂತಯಿಪ
ಹಾನು ಬಂಧಿಗಳಂತೆ ಒಳಹೊರಗಿದ್ದು ಕರುಣಾಳು॥

ಈ ಜಗನ್ನಾಥದಾಸರ ನುಡಿಯೇ ನಿನಗೆ ತಾರಕವೆಂದು ಉಪದೇಶಿಸಿದರು.

ಕಾಲನಾಮಕ ಪರಮಾತ್ಮನ ಇಚ್ಛೆಗನುಗುಣವಾಗಿ ಈ ಮಗುವು ದ ಯಲ್ಲಿ ಬೆಳೆದು 2 ವರ್ಷ ತುಂಬುತ್ತಿರುವಂತೆ ಇಹಲೋಕದ ಯಾತ್ರೆಯನ್ನ ಮಾಡಿತು.* ಪುನಃ 3 ವರ್ಷಗಳು ಉರುಳಿದ ನಂತರ ದಾಸರಿಗೆ ಮತ್ತೊ ಮಗು ಹುಟ್ಟಿತು. ಗುರುರಾಜರ ಪರಮಭಕ್ತರಾದ ದಾಸಾರ್ಯರು "ರಾಘವೇಂದ್ರ" ಎಂದು ಹೆಸರಿಟ್ಟರು. ರಾಘವೇಂದ್ರ ದಾಸಾರ್ಯರ ವ ಯರ ಲಾಲನೆಯಲ್ಲಿ ಬೆಳೆದನು. ಮಗುವಿಗೆ ಎರಡು ವರ್ಷ ತುಂಬಿದ ರಾಘವೇಂದ್ರನು ಆಡುತ್ತಾ ಕಟ್ಟೆಯ ಮೇಲಿಂದ ಕೆಳಗೆ ಬಿದ್ದನು. ಕೈ ಬೆಣಕಿ ನದ ವೈದ್ಯರು ಚಿಕಿತ್ಸೆ ಮಾಡಿ ಕೈಗೆ ಭಾರವಾದ ಕಬ್ಬಿಣದ ಕಡಗವನ್ನು ಸೂಚಿಸಿದರು. ದೇಸಾಯರು ಬಂಗಾರದ ಕಡಗವನ್ನೇ ಹಾಕಿದರು. ಸಹಕಾರದಿಂದ ದಾಸರು ಕಾಟಾಪುರಕ್ಕೆ ಹತ್ತಿರದ ಹಳ್ಳದ ದಂಡೆಯಲ್ಲಿ ಗುರುರಾಜರ ಮಂದಿರವನ್ನು ನಿರ್ಮಿಸಿದರು. ಟೀಕಾಕೃತ್ಪಾದರ ಹಾಗೂ ರಾ ಬೃಂದಾವನಗಳನ್ನು ಪ್ರತಿಷ್ಠಿಸಿ, ದೇಸಾಯರ ಕಡೆಯಿಂದ ನಿತ್ಯ ಪೂಜೆಗೆ ವ್ಯ ಮಾಡಿಸಿದರು.

ಹನ್ನೆರಡು ವರ್ಷಗಳು ಕಳೆದವು. ಅನುಭವಿಸಬೇಕಾದ ಸುಖಪ್ರಾ ಯಿತು. 13ನೇ ವರ್ಷ ಪ್ರಾರಂಭವಾಗುತ್ತಿರಲು ದಾಸಾರ್ಯರು, ಗು ಪ್ರೇರಿತರಾಗಿ, ಸಕಲ ಭೋಗ ಭಾಗ್ಯಗಳನ್ನು ತ್ಯಜಿಸಿ, ಉಟ್ಟಬಟ್ಟೆಯ ಮ ಹೊರಡಲು ಸಿದ್ಧರಾದರು. ಹೊರಡುವಾಗ ಚಿಕಿತ್ಸೆಗಾಗಿ ಮಗನ ಕೈಗ ಹಾಕಿದ್ದ ಕಡಗವನ್ನು ಸಹ ತೆಗೆಯಿಸಿದರು. ಸತ್ಯ ಸಂಕಲ್ಪನ ಚಿತ್ತಕ್ಕೆ ಬಂದಂತೆ ನ ಪ್ರತಿ ಜೀವಿಯ ಜೀವನ ಎನ್ನುವದನ್ನು ದೃಢವಾಗಿ ನಂಬಿದವರು ದಾಸರು 16 ಹಳ್ಳಿಗಳ ಜಹಗೀರಿಯನ್ನು ಕೊಡಲು ದೇಸಾಯರು ಸನ್ನದ್ಧರಾದರು. ನಸುನಕ್ಕರು. "ರಾಯಾ ಹರಿದಾಸಜೀವನ ವೇಷವಾಗಬಾರದು. ಮುಕ್ತಿಗೆ ವಾಗಬೇಕು. ನಮ್ಮ ಗುರುಗಳು ಮಾನವಿರಾಯರು "ಮುಕ್ತನಲ್ಲವೇ ಜೀವನ್ಮುಕ್ತ

---

* ಈ ಮಹನೀಯರೇ ಮುಂದೆ ವರದೇಶ ವಿಠಲರಾಗಿ ಅವತರಿಸಿ ದಾಸರಿಂದ ರಾದರೆಂಬುವುದು ಹಿರಿಯರ ವಚನ.

ಎಂದು ನುಡಿದಿರುವರು. ಅದೇ ನಮಗೂ ತಾರಕ" ಎಂದು ನುಡಿದು ಗುರುರಾಜರ ಪಾದಪದ್ಮಗಳನ್ನು ಸ್ಮರಿಸುತ್ತಾ ಭಾವಾವೇಶದಲ್ಲಿ:

"ಮುಕ್ತನಾವನೋ ಜೀವನ್ಮುಕ್ತನಾವನೋ ||ಪ||
ಮುಕ್ತನಾವನಿವರ ಪಾದಾಸಕ್ತನಾಗಿ ಸರ್ವಕರ್ಮ
ಭಕ್ತಿಯಿಂದ ಮಾಡಿ ವಿಷಯಾಸಕ್ತನಾಗದವನಿಗಿನ್ನ ||ಅ.ಪ.||
.. ... ... ........ ... ... .. ... ... ... .. ... ... .
ಕಲ್ಲು ಮಣ್ಣು ಹೊನ್ನು ಲೋಹ ಬೆಲ್ಲ ಬೇವು ಅಮೃತ ವಿಷವು
ಎಲ್ಲ ಸ್ವಾದು ಸಮವೆಂದು ಅಲ್ಲಿ ಇಚ್ಛೆ ಮಾಡದವಗಿನ್ನ||
ಸಿಟ್ಟು ಶೋಕ ಹರ್ಷ ಮೋಹ ಸುಟ್ಟು ಗುರುಜಗನ್ನಾಥ
ವಿಠಲನ್ನ ಭಜಿಸಿ ಜಗದಿ ಶಿಷ್ಟನಾಗಿ ಇರುವಗಿನ್ನ||"

ಎಂಬ ಹದಿನೈದು ನುಡಿಗಳಿಂದ ಕೂಡಿದ ಕೃತಿಯನ್ನು ಹಾಡಿ, "ರಾಯಾ! ನಿನಗೆ ಸನ್ಮಂಗಳ ಉಂಟಾಗಲಿ; ನಿನ್ನ ಈ ಹನ್ನೆರಡು ವರ್ಷದ ಸೇವೆಯಿಂದ ಗುರ್ವಂತರ್ಗತ ಶ್ರೀಹರಿ ಪ್ರೀತನಾಗಿರುವನು" ಎಂದು ನುಡಿದು ಹರಿಸಿದರು. ದಾಸರ ವೈರಾಗ್ಯವನ್ನು ಕಂಡ ದೇಸಾಯರು "ಇಂಥಾ ಗುರುಗಳನ್ನು ಪಡೆದ ನನ್ನ ಜನ್ಮ ಸಾರ್ಥಕವಾಯಿತು" ಎಂದು ಹಿಗ್ಗಿದರು.

ದಾಸರ ಪ್ರಯಾಣ ಸ್ವಾದಿಯತ್ತ ಸಾಗಿತು. "ಇಟ್ಟಾಂಗೆ ಇರುವೆನೊ ಹರಿಯೇ ಎನ್ನ ದೊರೆಯೇ," ಎಂಬ ಸಿದ್ಧಾಂತವನ್ನು ಪೂರ್ಣ ಮೈಗೂಡಿಸಿಕೊಂಡವರು ದಾಸರು. ರಿತ್ತಿಯಲ್ಲಿ ದಾಸರಿಗೆ ಸಹಧರ್ಮಚಾರಿಣಿಯ ವಿಯೋಗ ಸಂಭವಿಸಿತು. ದಾಸರ ಮನ ವಿಕಾರ ಹೊಂದಲಿಲ್ಲ. ಸುಖ ಬಂದಾಗ ಹಿಗ್ಗದ, ದುಃಖ ಬಂದಾಗ ಕುಗ್ಗದ ಇರುವವರೇ ಸ್ಥಿತ ಪ್ರಜ್ಞ+ರು.

"ನ ಯಾಚೇ ಗಜೇಂದ್ರಂ ನರೇಂದ್ರಾಧಿಪತ್ಯಂ
ನ ಯಾಚೇsಮರತ್ವಂ ನ ಲೋಕಾಧಿಪತ್ಯಂ
ನ ಜಾಯಾಂ ನ ಪುತ್ರಂ ನ ಶಿಷ್ಯಾಲಿಮನ್ನಂ
ನ ಭಾಗ್ಯಂ ಹರೇ! (ಗುರೋ!) ದೇಹಿ ತೇ ಪಾದದಾಸ್ಯಮ್||"

ಇದು ಹರಿ ಗುರುಗಳಲ್ಲಿ ದಾಸರು ನಿರಂತರ ಮಾಡುವ ಪ್ರಾರ್ಥನೆ. ದಾಸರು ಆಶಾಪಾಶಾದಿಗಳಿಂದ ದೂರರಾಗಿ ನಿರಂತರ ಹರಿಪಾದಾಸಕ್ತರಾದ ಮಹಾವಿರಕ್ತರು. ಈ ಮೇಲ್ಕಂಡ ವಿಷಯವನ್ನು ಅವರ ಶಿಷ್ಯರಲ್ಲಿ ಒಬ್ಬರಾದ ವರದ ವಿಠಲರು ಈ ಕೆಳಕಂಡಂತೆ ಬಣ್ಣಿಸಿರುವರು:

"ಸ್ವಸ್ಥಮನದಲಿ ಮಧುಕರ ವೃತ್ತಿಯಲಿದ್ದು
ಪ್ರಸ್ತಕವನೆ ರಚಿಸುತ್ತ ಇರಲು ಪ್ರ-
ಶಸ್ತರಾದ ಭಾರ್ಯೆಳು ಮೃತಿಯೈದಲಾಗ
ಸುತ್ತಲಿದ್ದ ಜನರಾಕ್ಷಣ ವ್ಯ-
ವಸ್ಥವ ಮಾಡಿಸಲು ಕ್ಲೇಶ ಸಂತೋಷಗಳಿಲ್ಲದೆ ಸ-
ಮಸ್ತರೊಡಗೂಡಿ ತೆರಳಿದರು ಸ್ವಾದಿಪುರಕೆ||"

ಸೋದೆಯನ್ನು ಸೇರಿದ ದಾಸಾರ್ಯರು, ಪಂಚ ಬೃಂದಾವನಗಳ ಮಧ್ಯದಲ್ಲಿ ರಾರಾಜಿಸುತ್ತಿರುವ ರಾಜರ ರಮ್ಯವಾದ ರೂಪವನ್ನು ಕಂಡರು. ಕಂಠ ತುಂಬಿತು; ಉದುರಿದವು ಆನಂದಾಶ್ರುಗಳು; ಭಕ್ತಿ ತರಂಗಗಳಿಂದ ಕೂಡಿದ ಕವಿತಾತರಂಗಿಣಿಯು ದಾಸರ ಹೃತ್ಕಂದರದಿಂದ ಹೊರ ಹೊಮ್ಮಿದಳು:

"ರಾಜರ ನೋಡಿರೈ ಇನತತಿ ತೇಜರ ಪಾಡಿರೈ
ರಾಜಿಪ ಶಿರಿವರ ವಾಜಿವದನ ಪದ
ಪೂಜಕರ ಸುರಸನ್ನುತರ||"

ದಾಸರು ರಾಜರ ಸನ್ನಿಧಿಯಲ್ಲಿ ಬಹುದಿನಗಳು ಕಳೆದರು.

**ಶಿಲಾ ಬೃಂದಾವನ ಪ್ರಾಪ್ತಿ:**

ಮುಂದೆ ದಾಸರು ಧಾರವಾಡಕ್ಕೆ ಬಂದರು. ಅಲ್ಲೇ ಪುರಂದರ ದಾಸರ ಆರಾಧನೆಯನ್ನು ಮಾಡಲು ನಿಶ್ಚಯಿಸಿದರು. ಆರಾಧನೆಯ ದಿನ ದಾಸರು ಯಥಾಪ್ರಕಾರ ಕಾಲಿಗೆ ಗೆಜ್ಜೆ ಕಟ್ಟಿ, ತಂಬೂರಿ ಮೀಟುತ್ತಾ, ತಲೆಗೆ ಕಾವೀವಸ್ತ್ರವನ್ನು ಸುತ್ತಿ, ಹೆಗಲಿಗೆ ಜೋಳಿಗೆಯನ್ನು ಹಾಕಿ ಯಾಯವಾರಕ್ಕೆ ಹೊರಟರು. ದಾಸರ ಜೋಳಿಗೆ ತುಂಬಿತು. ದಾಸರಿಗೆ ದಾನ ಮಾಡಿ ಜನ್ಮ ಧನ್ಯ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿಂದ, ಎಲ್ಲಾ ಗೃಹಸ್ಥರು ಯಥೇಚ್ಛವಾಗಿ ಧನ-ಧಾನ್ಯಗಳನ್ನು ತಂದು, ದಾಸರ ಅಡಿದಾವರೆಗಳಿಗೆ ಅರ್ಪಿಸಿದರು. ಆರಾಧನೆಯು ವಿಜೃಂಭಣೆಯಿಂದ ನಡೆಯಿತು. "ನಾಳಿಗೆ ಹ್ಯಾಂಗೆಂಬೊ ಚಿಂತೆ ಬೇಡ" ಎಂಬ ವಿಜಯದಾಸರ ಹಿತೋಕ್ತಿಯನ್ನು ದಾಸರು ಆಚರಣೆಯಲ್ಲಿ ತೋರಿಸಿದರು. ಬಂದ ಧನ-ಧಾನ್ಯವನ್ನೆಲ್ಲಾ ದಾನ ಧರ್ಮ ಸಂತರ್ಪಣೆಗಳಿಗಾಗಿ ವಿನಿಯೋಗಿಸಿ ಮುಗಿಸಿದರು. ಭಗವದ್ಭಕ್ತರ ಪ್ರಾರ್ಥನೆಯ ಮೇರೆಗೆ ದಾಸರು ಮುಂದೆ ಶಿಗ್ಗಾವಿಗೆ ಪ್ರಯಾಣ ಮಾಡಿದರು.

ಶಿಗ್ಗಾವಿಗೆ ಏಳು ಮೈಲು ದೂರದಲ್ಲಿ ಬೊಮ್ಮನಹಳ್ಳಿ ಎಂಬ ಚಿಕ್ಕ ಗ್ರಾಮ. ಗ್ರಾಮದಲ್ಲಿ ಅಗ್ನಿಹೋತ್ರಿಗಳ ಮನೆತನಕ್ಕೆ ಸೇರಿದ ಇಬ್ಬರು ಹೆಂಗಸರಿದ್ದರು. ಇಬ್ಬರೂ ವಿಧವೆಯರೇ. ಎಲ್ಲ ಬಂಧುಗಳನ್ನು ಕಳೆದುಕೊಂಡ ಅನಾಥೆಯರು. ಅಗ್ನಿಹೋತ್ರಿಗಳು ಎನ್ನುವುದು ಇವರ ಮನೆತನದ ಹೆಸರು. ಇವರ ಪೂರ್ವಿಕರು ನಿತ್ಯಾಗ್ನಿಹೋತ್ರಿಗಳಾಗಿದ್ದರಂತೆ. ಜ್ಞಾನ-ಭಕ್ತಿ-ವೈರಾಗ್ಯಗಳು ಈ ಮನೆತನದವರ ಸೊತ್ತಾಗಿದ್ದವಂತೆ. ಅಗ್ನಿಹೋತ್ರಿಗಳ ಮನೆಯು ನಿರಂತರ ನಡೆಯುವ ವೇದಘೋಷಣೆಯಿಂದಲೂ, ಶಾಸ್ತ್ರಾರ್ಥ ವಿಚಾರದಿಂದಲೂ ಆ ಗ್ರಾಮದ ಜನರಿಗೆ ದೇವಾಲಯವಾಗಿತ್ತು. ಅದಾವ ಭಗವತ್ಸಂಕಲ್ಪವೋ ಅಗ್ನಿಹೋತ್ರಿಗಳ ಮನೆತನ ಬೆಳೆಯಲಿಲ್ಲ. ಕೊನೆಗೆ ಆ ವಂಶದಲ್ಲಿ ಉಳಿದವರೆಂದರೆ ಆ ವಿಧವೆಯರಿಬ್ಬರೇ.

ಒಮ್ಮೆ ಆ ಸ್ತ್ರೀಯರಿಬ್ಬರಿಗೂ ಏಕಕಾಲದಲ್ಲಿ ಸ್ವಪ್ನದಲ್ಲಿ ಶ್ರೀಗುರು ರಾಘವೇಂದ್ರರು ಕಾಣಿಸಿಕೊಂಡು, "ನಿಮ್ಮ ಮನೆಯ ಗೋಡೆಯಲ್ಲಿ, ನಮ್ಮ ಶಾಲಗ್ರಾಮ ಶಿಲಾ ಬೃಂದಾವನವಿದೆ. ನೀವು ನಮ್ಮ ತಲೆಯ ಮೇಲೆ ದೀಪವನ್ನಿಡುತ್ತಿರುವಿರಿ. ಇನ್ನು ಸ್ವಲ್ಪ ಹೊತ್ತಿನಲ್ಲೇ, ಗುರುಜಗನ್ನಾಥದಾಸರೆಂಬ ನಮ್ಮ ಭಕ್ತರು, ನಿಮ್ಮಲ್ಲಿಗೆ ನಮಗಾಗಿ ಬರುವರು. ಅವರಿಗೆ ನಮ್ಮನ್ನು ಕೊಟ್ಟು ಬಿಡಿರಿ" ಎಂದು ಸೂಚಿಸಿದರು. ಸ್ತ್ರೀಯರಿಬ್ಬರು ಎಚ್ಚೆತ್ತು ದಿಗ್ಭ್ರಾಂತರಾದರು. ಓಡಿಹೋಗಿ ಮಾಡದಲ್ಲಿರುವ ದೀಪವನ್ನು ತೆಗೆದರು.

ಗೋಡೆಯ ಒಳಗಡೆ ಗುರುರಾಜರು ನಗುತ್ತಾ ಆಶೀರ್ವದಿಸುವಂತೆ ಕಾಣಿಸಿತು. ಆ ಕ್ಷಣದಲ್ಲಿ ಅವರಿಗೆ ವಿಚಿತ್ರವಾದ ಆನಂದದ ಅನುಭವವಾಯಿತು. ಇನ್ನು ಅವರ ನಿರೀಕ್ಷಣೆ ದಾಸರಿಗಾಗಿ.

ಇತ್ತ ಶಿಗ್ಗಾವಿಯಲ್ಲಿದ್ದ ದಾಸರಿಗೂ ಅದೇ ವಿಧದ ಸೂಚನೆ. ತಕ್ಷಣ ಶಿಷ್ಯರನ್ನೆಲ್ಲಾ ಎಬ್ಬಿಸಿದರು. ತಮ್ಮಲ್ಲಿ ಗುರುರಾಜರು ತೋರಿದ ಕರುಣೆಯನ್ನು ಎಲ್ಲರಿಗೂ ವಿವರಿಸಿದರು. ಗುರುರಾಜರನ್ನು ಕರೆತರಲು ದಾಸರು ಆದೇ ಕ್ಷಣದಲ್ಲಿ, ಕತ್ತಲನ್ನು ಲೆಕ್ಕಿಸದೆ, ಸಕಲಸಜ್ಜನ ವೃಂದದೊಡನೆ ಬೊಮ್ಮನಹಳ್ಳಿಗೆ ಪ್ರಯಾಣ ಬೆಳೆಸಿದರು. ದಾಸರಿಗೆ ಒಂದೊಂದು ಕ್ಷಣವೂ ಯುಗವಾಗಿದೆ, ರಾತ್ರಿ ಸ್ವಪ್ನದಲ್ಲಿ ಕಂಡ ಸುಂದರ ಬೃಂದಾವನವೇ ಎಲ್ಲೆಡೆಯಲ್ಲೂ ಕಾಣುತ್ತಿದೆ. ಮೈಮರೆತು ಭಕ್ತವೃಂದವು ಭಜನೆ ಮಾಡುತ್ತಾ ಅನುಸರಿಸುತ್ತಿರಲು, ಸೂರ್ಯೋದಯವಾಗುತ್ತಿದ್ದಂತೆ ದಾಸರು ಬೊಮ್ಮನಹಳ್ಳಿಯನ್ನು ಪ್ರವೇಶಿಸಿದರು. ಜೀವಿತೇಶ್ವರರಾದ ಗುರುರಾಜರು ನೆಲೆಸಿರುವ ಅಗ್ನಿಹೋತ್ರಿಗಳ ಮನೆಯ ಮುಂದೆ ಬಂದು ನಿಂತರು. ಅಂಗಳದಲ್ಲೇ ಸಾಷ್ಟಾಂಗ ನಮಸ್ಕಾರ ಮಾಡಿದರು. ದಾಸರಿಗಾಗಿಯೇ ಕಾಯುತ್ತಿದ್ದ ಮಹಿಳೆಯರಿಬ್ಬರೂ ಓಡಿಬಂದು ನಮಸ್ಕರಿಸಿದರು. ಸ್ನಾನ ಆಹ್ನೀಕಗಳಾದವು. ಸ್ವತಃ ದಾಸರೇ ಗುರುರಾಜರು ಅಡಗಿ ನಿಂತಿರುವ ಗೋಡೆಯನ್ನು ತೋಡಿದರು. ಕೆಲವೇ ಕ್ಷಣಗಳಲ್ಲಿ ಶಾಲಗ್ರಾಮ ಶಿಲಾಮಯವಾದ ಸುಂದರ ಬೃಂದಾವನವು ಗೋಚರವಾಯಿತು. ಎಲ್ಲರೂ ಮುಕ್ತಕಂಠದಿಂದ "ರಾಜಾಧಿರಾಜ ಗುರುಸಾರ್ವಭೌಮಾಂತರ್ಗತ ಗೋವಿಂದಾ! ಗೋವಿಂದಾ! ಗೋವಿಂದಾ!" ಎಂದು ಕೂಗಿದರು. ಸುಂದರ ಬೃಂದಾವನ; ಅದಕ್ಕೆ ತಕ್ಕಂತೆ ಅಸದೃಶವಾದ ಕೂರ್ಮಾಸನ; ದಾಸರ ಕಣ್ಣುಗಳಿಂದ ಆನಂದಾಶ್ರುಗಳು ಹರಿದವು. ಕಂಠವು ಗದ್ಗದಿತವಾಯಿತು. ದಾಸರಿಗೆ ಸುಂದರ ಬೃಂದಾವನದ ಮಧ್ಯದಲ್ಲಿ ಮಂದಹಾಸ ಬೀರುತ್ತಿರುವ ಗುರುರಾಜರ ಸಂದರುಶನವಾಯಿತು. ಆ ಕ್ಷಣದಲ್ಲಿ ದಾಸರು ಮೈಮರೆತು:

ನೋಡಿದೆ ಗುರುರಾಜರನ್ನ ಈ ರೂಢಿಯೊಳಗೆ ಮೆರೆವ ಸಾರ್ವಭೌಮನ||

ಥಳಥಳಿಸುವ ಬೃಂದಾವನದಿ ತಾನು
ಕುಳಿತು ಭಕ್ತರಿಗೀವ ವರವನ್ನು ತ್ವರದಿ
ನಳಿನನಾಭನ ಕೃಪಾಬಲದಿ ಇದೆ
ನಳಿನಜಾಂಡದಿ ಸರಿಗಾಣೆ ಮಹಿಮಾದಿ ||1||

ಪೊಳೆವ ವಕ್ಷಸ್ಥಳದವನ ಎಳೆ
ತುಳಸಿಮಾಲಾಂಕಿತ ಕಂಧರಯುತನ
ನಳಿನಾಕ್ಷ ಮಾಲೆ ಶೋಭಿತನ ಊರ
ಚಲುವ ದ್ವಾದಶ ಪುಂಡ್ರ ಮುದ್ರ ಚಿಹ್ನಿತನ ||2||

ಕೃಷ್ಣವರ್ಣದಿ ಶೋಭಿವನ ಮುಖ
ವೃಷ್ಣವ ಕುಮುದ ನಿಕರಕೆ ಚಂದಿರನ
ವಿಷ್ಣು ಭಕ್ತಾಗ್ರೇಸರನ ಬಾಲ
ಕೃಷ್ಣಮೂರುತಿ ಪದಯುಗ ಸರೋಜ ಇನ ||3||

ದಿನನಾಥ ದೀಪ್ತಿ ಭಾಸಕನ ಭವ
ವಸಧಿ ಸಂತರಸಣ ಸುಪೋತಕೋಪಮನ
ಮುನಿಜನ ಕುಲದಿ ಶೋಭಿಪನ ಸ್ವೀಯ
ಜನರ ಪಾಲಕ ಮಹಾರಾಯನೆನಿಪನೆ ||4||

ಗುರುಜಗನ್ನಾಥ ವಿಠಲನ ಪಾದ–
ಸರಸಿಜ ಯುಗಳ ಕಾರಡಿಯೆನಿಪನ
ಪೊರೆವನು ತನ್ನ ಜನರನ ಎಂದು
ಶಿರಸದಿ ನಮಿಸಿ ಬೇಡಿದೆ ಗುರುವರನ ||5||

ಎಂದು ಹಾಡಿ ಕುಣಿದರು. ಗುರುರಾಜರಿಗೆ ಪಂಚಾಮೃತಾಭಿಷೇಕ–ನೈವೇದ್ಯಾದಿಗಳು ನಡೆದವು. ಮಹಿಳೆಯರು ಗುರುರಾಜರನ್ನು ದಾಸರಿಗೆ ಒಪ್ಪಿಸಿದರು. ಸಾಂಶರಾದ ಗುರುರಾಜರು ಎರಡು ಬೃಂದಾವನಗಳಲ್ಲಿ ಸನ್ನಿಹಿತರಾಗಿ ದಾಸರಿಂದ ನಿತ್ಯ ಪೂಜೆ ತೆಗೆದುಕೊಳ್ಳುತ್ತಿದ್ದರು.

**ವಿಶ್ವಾಸೋ ಫಲದಾಯಕಃ:**

ಶಿಗ್ಗಾವಿಯಲ್ಲಿ ರಾಮಾಚಾರ್ಯ ಸುಶೀಲಮ್ಮ ಎನ್ನುವ ಬಡದಂಪತಿಗಳಿದ್ದರು. ಇಬ್ಬರಿಗೂ ದಾಸರಲ್ಲಿ ಭಕ್ತಿ. ರಾಮಾಚಾರ್ಯನಿಗೆ ಮದುವೆಯಾಗಿ ಬಹಳ ವರ್ಷಗಳು ಕಳೆದಿದ್ದರೂ ಮಕ್ಕಳಾಗಿದ್ದಿಲ್ಲ. ದಾಸರ ಉಪದೇಶದಂತೆ ದಂಪತಿಗಳಿಬ್ಬರು ನಿಷ್ಠೆಯಿಂದ ಗುರುರಾಜರನ್ನು ಸೇವಿಸಿದರು. ಸೇವೆ ಫಲಿಸಿತು; ಸುಶೀಲಮ್ಮ ಗಂಡು ಮಗುವಿಗೆ ಜನ್ಮವಿತ್ತಳು. ಆದರೆ ಸುಶೀಲಮ್ಮನಿಗೆ ಬಾಣಂತಿ ರೋಗವು ಹತ್ತಿಕೊಂಡಿತು. ಯಾವ ಔಷಧ–ಪಥ್ಯಗಳಿಗೂ ರೋಗವು ಮಣಿಯಲಿಲ್ಲ. ರಾಮಾಚಾರ್ಯನು ಪ್ರತಿನಿತ್ಯ ದಾಸರಲ್ಲಿಗೆ ಬಂದು ತನ್ನ ಎಲ್ಲ ವ್ಯವಹಾರವನ್ನು ನಿವೇದಿಸಿಕೊಳ್ಳುತ್ತಿದ್ದನು.

ಒಮ್ಮೆ ಸಾಯಂಕಾಲ; ಆಗಲೇ ಮಳೆ ಬಂದು ನಿಂತಿತ್ತು. ಸಾತ್ವಿಕ ಅಭಿಮಾನಿಗಳಿಗೆ ಸದುಪದೇಶ ನೀಡಲು ಹೊರಗೆ ಹೋಗಿದ್ದ ದಾಸರು, ರಾಮಾಚಾರ್ಯರ ಮನೆಗೆ ಬಂದರು. ಹೆಂಡತಿಯ ಆರೈಕೆಯಲ್ಲಿ ತೊಡಗಿದ್ದ ರಾಮಾಚಾರ್ಯನು, ದಾಸರ ಆಗಮನವನ್ನು ಕಂಡು ಓಡಿಬಂದು ಆದರದಿಂದ ಸ್ವಾಗತಿಸಿದನು. ಕಟ್ಟೆಯ ಮೇಲೆ ಕುಳಿತ ದಾಸರು, ತಮ್ಮ ಕಾಲಿಗೆ ಅಂಟಿಕೊಂಡಿದ್ದ ಮಣ್ಣನ್ನು ಕೈಯಿಂದ ತಗೆಯುತ್ತಾ, ಪಿಜಯದಾಸರ ನೃಸಿಂಹ ಸುಳಾದಿಯನ್ನು ಪಠಿಸಹತ್ತಿದರು. ಸುಳಾದಿ ಪಾರಾಯಣ ಪೂರ್ತಿಯಾಯಿತು. ರಾಮಾಚಾರ್ಯನು, "ಮುತ್ಯಾ! ಅವಳಿಗೆ ರೋಗವು ಕಡಿಮೆಯಾಗುತ್ತಾ ಇಲ್ಲ. ದಿನದಿನಕ್ಕೆ ಕ್ಷೀಣಿಸುತ್ತಿದ್ದಾಳೆ. ಬರಡಾದ ನಮ್ಮ ಜೀವನದಲ್ಲಿ ಅಮೃತವೃಷ್ಟಿ ಸುರಿದಂತೆ ನಿಮ್ಮ ದಯೆಯಿಂದ ಗಂಡುಮಗುವಾಗಿದೆ. ಈಗ ಅವಳಿಗೆ ಬಂದ ವಿಪತ್ತರಿಹಾರಕರೂ ಸಹ ನೀವೇ; ನಿಮ್ಮನ್ನೇ ನಂಬಿದ್ದೇನ" ಎಂದನು. ಆಗ ದಾಸರು, "ರಾಮಾಚಾರ್ಯ! ನಾನೂ ನಿನ್ನಂತ ಮನುಷ್ಯ. ನಿಷ್ಕಲ ಭಕ್ತಿಯಿಂದ ಗುರ್ವಂತರ್ಗತ ಪ್ರಾಣೇಶನನ್ನು ಸೇವಿಸಿದೆ. ಸಂತಾನ ಗೋಪಾಲಕೃಷ್ಣನು ನಿನ್ನಲ್ಲಿ ದಯೆ ತೋರಿದನು. ನನಗೆ ವೈದ್ಯ ತಿಳಿಯದು. ನಿನಗಾಗಿ ಧನ್ವಂತರಿಯನ್ನು ಪ್ರಾರ್ಥಿಸುತ್ತೇನೆ. ಜ್ವರವನ್ನೂ,

ಅಪಮೃತ್ಯುವನ್ನೂ ಪರಿಹರಿಸುವ ನೃಸಿಂಹನು ಖಂಡಿತ ನಿನ್ನನ್ನು ಅನುಗ್ರಹಿಸುವನು" ಎಂದು ಹೇಳಿ ಹೊರಟುಹೋದರು.

ರಾಮಾಚಾರ್ಯನು ದಾಸರು ಕುಳಿತಿದ್ದ ಸ್ಥಳವನ್ನು ಕೈಯಿಂದ ಸವರಿ, ಅಲ್ಲಿ ಉದುರಿದ್ದ ಅವರ ಕಾಲಿನ ಮಣ್ಣನ್ನು ಭಕ್ತಿಯಿಂದ ಎತ್ತಿ ಕೈಗೆ ತೆಗೆದುಕೊಂಡನು. ಕೈಯಲ್ಲಿರುವ ದಾಸರ ಪಾದಮೃತ್ತಿಕೆ ಆ ಕ್ಷಣದಲ್ಲಿ ರಾಮಾಚಾರ್ಯನ ಪಾಲಿಗೆ ದಿವ್ಯ ಔಷಧದಂತೆ ಕಂಡಿತು. ಮನೆಯೊಳಗೆ ಓಡಿದ; "ಸುಶೀಲಾ! ಇಂದಿಗೆ ನಿನ್ನ ರೋಗ ಪರಿಹಾರವಾಯಿತು. ಮುತ್ಯ ಅನುಗ್ರಹಿಸಿ ನಿನಗಾಗಿ ದಿವ್ಯ ಔಷಧವನ್ನು ಕೇಳದೆ ಕೊಟ್ಟಿರುವನು, ಹಿಡಿ" ಎಂದು ಹೇಳುತ್ತಾ, ತಾನು ತಂದಿದ್ದ ದಾಸರ ಪಾದಮೃತ್ತಿಕೆ ಯನ್ನು ಸುಶೀಲಮ್ಮನ ಬಾಯಿಗೆ ಹಾಕಿದ. ಮೈಗೆಲ್ಲಾ ಸವರಿದ. "ನಂಬಿ ಕೆಟ್ಟವರಿ ಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ" ಇದಲ್ಲವೇ ಪುರಂದರದಾಸರ ನುಡಿ. ರಾಮಾ ಚಾರ್ಯನ ವಿಶ್ವಾಸ ಫಲಿಸಿತು. ಸರ್ವಾಂತರ್ಯಾಮಿಯಾದ ದೇವದೇವನಾದ ಧನ್ವಂತ ರಿಯು ರಾಮಾಚಾರ್ಯನ ಪತ್ನಿಯ ರೋಗವನ್ನೂ, ಅವರ ಭವರೋಗವನ್ನೂ ಕಳೆದನು.

**ಗುರುವು ದೊರೆತರೆ ಹರಿ ತಾ ದೊರೆವನು:**

ದಾಸರು ಗುರುರಾಜರ ಎರಡು ಭವ್ಯ ಬೃಂದಾವನಗಳನ್ನು ಹಿಂದಿಟ್ಟುಕೊಂಡು ಸವಣೂರಿಗೆ ಬಂದರು. ಸತ್ಯಬೋಧರ ದರ್ಶನ ಪಡೆದು ಪುನಃ ರಿತ್ತಿಗೆ ಬಂದು, ಅಲ್ಲಿ ಧೀರೇಂದ್ರರ ಸೇವೆಯಲ್ಲಿ ಕೆಲಕಾಲ ಕಳೆದರು. ಒಮ್ಮೆ ಕರ್ಜಗಿಯಲ್ಲಿ ನೆಲೆನಿಂತ ಶ್ರೀದ ವಿಠಲರ ಆರಾಧ್ಯಮೂರುತಿ ಪಾಂಡುರಂಗವಿಠಲ ದಾಸರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತನ್ನ ದರ್ಶನಕ್ಕೆ ಬರಲು ಆದೇಶ ನೀಡಿದ. ದಾಸರು ಕರ್ಜಗಿಗೆ ಪ್ರಯಾಣ ಬೆಳೆಸಿದರು. ಕರ್ಜಗಿಯಲ್ಲಿ ದಾಸರ ಬಿಡಾರ ಶ್ರೀದ ವಿಠಲರ ಪಾದಧೂಳಿಯಿಂದ ಪಾವನವಾದ ಮನೆಯಲ್ಲಾಯಿತು. ದಾಸರು, "ಈ ಸ್ಥಳ ಪರಮ ಪವಿತ್ರವಾದುದು. ಜಗನ್ನಾಥ ದಾಸರು–ಪ್ರಾಣೇಶದಾಸರು ನಡೆದಾಡಿದ ಸ್ಥಳ. ಈ ಮನೆಯಲ್ಲೇ ಗೋಪಾಲಕೃಷ್ಣನು ಶ್ರೀದ ವಿಠಲರಿಗೆ ಒಲಿದು ಕುಣಿದಿದ್ದಾನೆ. ಶ್ರೀದ ವಿಠಲರು ಆನಂದಸಂದನನೊಡನೆ ಆನಂದ ದಿಂದ ಆಡಿದ್ದಾರೆ. ಇದು ಕೃಷ್ಣನ ಪಾದಧೂಳಿಯಿಂದ ಪವಿತ್ರವಾದ ಎರಡನೆಯ ನಂದವ್ರಜ" ಎಂದು ತಮ್ಮ ಅಭಿಮಾನಿಗಳಿಗೆಲ್ಲಾ ತಿಳಿಸಿದರು. ಶ್ರೀದ ವಿಠಲರ ಆರಾಧ್ಯ ಮೂರುತಿಯಾದ ವಿಠಲನ ಮುಂದಿರಕ್ಕೆ ಬಂದರು. ವಿಠಲನ ಮುಂದ ಮೈಮರೆತು ನರ್ತನ ಮಾಡಿದರು. ನೆರೆದ ಭಕ್ತವೃಂದಕ್ಕೆ ಶ್ರೀದ ವಿಠಲರೇ ಕುಣಿಯುತ್ತಿರುವಂತೆ ಭಾಸವಾಯಿತು. ದಾಸರು ಒಂದು ವಾರದವರೆಗೆ ಕರ್ಜಗಿಯಲ್ಲೇ ಇದ್ದುಬಿಟ್ಟರು.

ಊರಿಗೆ ಹೊರಡುವ ದಿನ, ಗುರುರಾಜರ ಪೂಜಾದಿಗಳು ಮುಗಿದವು. ಕರ್ಜಗಿ ದಾಸರಿಗೆ ದೂರದ ಬಂಧುಗಳಾದ ಮನೆಯ ಯಜಮಾನರು, ದಾಸರಿಗೆ ದಕ್ಷಿಣೆ ಸಮ ರ್ಪಿಸಲು ಬಂದರು. ಅವರನ್ನು ದಾಸರು ತಡೆದರು. "ರಾಯರೇ! ಎಲ್ಲವನ್ನೂ ಬಿಟ್ಟು ಬಂದವರು ನಾವು. ಆ ಶ್ರೀ ವಲ್ಲಭನು ನಿಮ್ಮಂಥಾ ಸದ್ಗೃಹಸ್ಥರದ್ವಾರಾ ನಮಗೆ ಯಾವ ಕೊರತೆಯಿಲ್ಲದಂತೆ ಮಾಡಿರುವನು. ಈ ದುಡ್ಡು ನಮಗೆ ಬೇಡ" ಎಂದರು. ಯಜ ಮಾನನು ಸುಮ್ಮನಾಗಲಿಲ್ಲ. "ಸತ್ಪಾತ್ರರಿಗೆ ಮಾಡಿದ ದಾನ ಅನಂತವಾಗಿ ಕುಲಕೋಟಿ

ಯನ್ನು ಉದ್ಧರಿಸುವುದು. ನಮ್ಮ ಉದ್ಧಾರಕ್ಕಾಗಿ ತಾವು ಏನಾದರೂ ಸ್ವೀಕರಿಸಲೇ ಬೇಕು" ಎಂದು ಯಜಮಾನನು ಹಟಹಿಡಿದನು. ದಾಸರು ನಗುತ್ತಾ "ಹಾಗಾದರೆ ಯಜಮಾನರೇ! ನಾವು ಕೇಳಿದುದನ್ನು ಕೊಡುವಿರಾ?" ಎಂದರು. ಅದಕ್ಕೆ ಸಮ್ಮತಿಸಿದನು ಗೃಹಸ್ಥನು. ದಾಸರು ಮನೆಯಲ್ಲಿ ಒಂದು ಸ್ಥಳವನ್ನು ತೋರಿ, "ಇಲ್ಲಿ ಶ್ರೀದವಿಠಲರಿಂದ ಅರ್ಚಿತರಾದ ಶ್ರೀ ಮುರಳಿ ಕೃಷ್ಣ ಹಾಗೂ ಸೀತಾ ಸಮೇತ ಶ್ರೀರಾಮಚಂದ್ರದೇವರು ಇರುವರು. ಆ ನಮ್ಮ ದೇವರನ್ನು ನಮಗೆ ಕೊಡಿರಿ. ಅನಂತಾನಂತ ಸಂಪತ್ತನ್ನು ಧಾರೆಯೆರೆದ ಪುಣ್ಯವು ನಿಮಗೆ ಲಭಿಸುವುದು" ಎಂದರು. ಎಲ್ಲರಿಗೂ ಆಶ್ಚರ್ಯವಾಯಿತು. ಗೃಹಸ್ಥನು ಸಂತೋಷದಿಂದ "ಹಾಗೆಯೇ ಆಗಲಿ! ಇದು ಮಹಾಭಾಗ್ಯ" ಎಂದನು. ದಾಸರು ಭೂಮಿಯನ್ನು ಅಗೆದರು. ಒಳಗಡೆ ಒಂದು ಪೆಟ್ಟಿಗೆ, ಹಿತ್ತಾಳಿಯ ಮಣೆ ಕಾಣಿಸಿಕೊಂಡವು. ಪೆಟ್ಟಿಗೆಯಲ್ಲಿ ದಾಸರು ಹೇಳಿದಂತೆ, ಸುಂದರವಾದ ಸೀತಾ–ರಾಮ–ಕೃಷ್ಣರ ಮೂರು ಪ್ರತಿಮೆಗಳಿದ್ದವು. ದಾಸರ ಆನಂದಕ್ಕೆ ಅವಧಿಯೇ ಇಲ್ಲದಾಯಿತು. ದಾಸರು ಸೀತಾ–ರಾಮ–ಕೃಷ್ಣರನ್ನು ರಾಯರ ಬೃಂದಾವನದ ಮೇಲಿಟ್ಟು ಮತ್ತೊಮ್ಮೆ ಮಂಗಳಾರತಿ ಮಾಡಿದರು.

ಮುಂದೆ ದಾಸರು ಧಾರವಾಡ ಪ್ರಾಂತದಿಂದ ಪ್ರಯಾಣ ಬೆಳೆಸಿದರು. ಸಂಚಾರ ಮಾಡುತ್ತಾ ಆದವಾನಿಗೆ ಹತ್ತಿರದಲ್ಲಿರುವ ವಿರುಪಾಪುರಕ್ಕೆ ಬಂದರು. ವಿರುಪಾಪುರದಲ್ಲಿ ಪ್ರಾಚೀನವಾದ ವೆಂಕಟರಮಣನ ದೇವಾಲಯವಿದೆ. ವರಪ್ರದನಾದ ಶ್ರೀನಿವಾಸ ತನ್ನ ಭಕ್ತನಿಗೆ ಸ್ವಾಗತ ಬಯಸಿದ. ಜ್ಞಾನಿಗಳು ಗುರುರಾಜರನ್ನು ಕರೆದುಕೊಂಡು ತಮ್ಮ ಊರಿಗೆ ಬಂದುದಕ್ಕಾಗಿ ಊರಿನ ಜನರೆಲ್ಲಾ ಸಂತೋಷಪಟ್ಟರು. ಗುರುರಾಜರ ಎರಡು ಬೃಂದಾವನಗಳನ್ನು ಶ್ರೀನಿವಾಸನ ಸನ್ನಿಧಿಯಲ್ಲಿರಿಸಿ ದಾಸರು ದೇವಾಲಯದಲ್ಲೇ ತಂಗಿದರು. ದಾಸರ ಮಗ ಯುಕ್ತ ವಯಸ್ಸಿಗೆ ಬಂದನು. ತಂದೆಯವರಲ್ಲೇ ವೇದಾಂತವನ್ನು ಅಧ್ಯಯನ ಮಾಡಿದನು. ಪ್ರತಿನಿತ್ಯ ತಂದೆಯ ಸೇವೆ, ವೇದಾಂತಾಧ್ಯಯನ, ಗುರುರಾಜರ ಸೇವೆ, ಇವೇ ರಾಘವೇಂದ್ರನ ನಿತ್ಯ ಕರ್ತವ್ಯವಾಗಿತ್ತು. ದಾಸರು ಮಗನಿಗೆ ವಿವಾಹ ಮಾಡಲು ನಿಶ್ಚಯಿಸಿದರು. ಶಿಗ್ಗಾವಿಯ ಸದ್ಗೃಹಸ್ಥರ ಮಗಳಾದ ಭಾಗೀರಥೀಬಾಯಿ ಯೊಡನೆ ರಾಘವೇಂದ್ರಾಚಾರ್ಯನ ಮದುವೆಯಾಯಿತು.

ಆದವಾನಿಗೆ ದಕ್ಷಿಣಕ್ಕೆ ವಿರುಪಾಪುರವಾದರೆ ಪಶ್ಚಿಮಕ್ಕೆ ಕೌತಾಳ ಗ್ರಾಮ. ಕೌತಾಳವು ಆದವಾನಿಯಿಂದ ಹದಿನೆಂಟು ಮೈಲಿ ದೂರದಲ್ಲಿದೆ. ಕೌತಾಳ ಅವಧೂತ ರಂಗಯ್ಯನವರ ದಿವ್ಯಸನ್ನಿಧಾನದಿಂದ ಧರ್ಮಕ್ಕೆ ತವರೂರಾಗಿತ್ತು. ಹನುಮಂತರಾಯರೆಂಬುವರು ಗ್ರಾಮದ ಶಾನುಭೋಗರು. ದುಷ್ಕರ್ಮವಶದಿಂದ ಹನುಮಂತರಾಯರು ವ್ಯಾಧಿಗ್ರಸ್ಥರಾದರು. ದಿನದಿನಕ್ಕೆ ವ್ಯಾಧಿ ಪ್ರಬಲವಾಯಿತು. ಯಾವ ಔಷಧವೂ ವ್ಯಾಧಿಯ ಮೇಲೆ ತನ್ನ ಪ್ರಭಾವವನ್ನು ಬೀರಲಿಲ್ಲ. ಎಲ್ಲರೂ ಹನುಮಂತರಾಯನನ್ನು ಕೈಬಿಟ್ಟರು. ಹನುಮಂತರಾಯನ ಪತ್ನಿಗೆ ಯಾರೋ ಹೇಳಿದರು "ವಿರುಪಾಪುರದಲ್ಲಿರುವ ದಾಸರಿಗೆ ಮೊರೆ ಹೊಕ್ಕರೆ ಹನುಮಂತರಾಯನು ಬದುಕಬಹುದು" ಎಂದು. ಸಾಧ್ವಿ ವೆಂಕಮ್ಮ ವಿರುಪಾಪುರಕ್ಕೆ ಬಂದು ದಾಸರ ಅಡಿಗಳಲ್ಲಿ ಶಿರಬಾಗಿ ತನ್ನ ಮಾಂಗಲ್ಯವನ್ನು

ಕಾಪಾಡಬೇಕೆಂದು ಬೇಡಿದಳು. ಹನುಮಂತರಾಯನ ದುಷ್ಕರ್ಮ ಮುಗಿದಿತ್ತು. ಗುರು ರಾಜರನ್ನು ಕರೆದುಕೊಂಡು ಕೌತಾಳಕ್ಕೆ ಪ್ರಯಾಣ ಬೆಳೆಸಿದರು.

"ಗುರುರಾಜ ಗುರುಸಾರ್ವಭೌಮ
ಗುರುರಾಜ ಗುರುಸಾರ್ವಭೌಮ ನಿನ್ನಯ ಪಾದ
ಸರಸಿಜ ಯುಗಕಭಿನಮಿಸುವೆ"

ಎಂಬ ಇಪ್ಪತ್ತಾರು ನುಡಿಯ ಹಾಡನ್ನು ರಚಿಸಿ, ಗುರುರಾಜರನ್ನು ಪ್ರಾರ್ಥಿಸಿ, ಹನು ಮಂತರಾಯನಿಗೆ ಬಂದ ವ್ಯಾಧಿಯನ್ನು ಪರಿಹರಿಸಿದರು. ದಾಸರ ಅನುಗ್ರಹದಿಂದ ಹನುಮಂತರಾಯನಿಗೆ ಹೊಸ ಜನ್ಮವೇ ಪ್ರಾಪ್ತವಾಯಿತು. ಮನಸ್ಸಿನಲ್ಲಿ ಜ್ಞಾನದ ಬೆಳಕು ಹರಿಯಿತು. ದಾಸರು ಹನುಮಂತರಾಯನಿಗೆ 'ವರದ ವಿಠಲ' ಎಂಬ ಅಂಕಿತವನ್ನು ಉಪದೇಶಿಸಿದರು.

ಕಾರಣಾಂತರಗಳಿಂದ ತಮ್ಮ ನೈಜವನ್ನರಿಯದೆ ಅಜ್ಞಾನಾಂಧಕಾರದಲ್ಲಿ ಬಿದ್ದ ಸುಜೀವಿಗಳ ಹೃದಯದಲ್ಲಿ ಜ್ಞಾನ ಜ್ಯೋತಿಯನ್ನು ಬೆಳಗಿಸುವುದನ್ನೇ ಪ್ರಧಾನ ಸಾಧನೆ ಯನ್ನಾಗಿಟ್ಟುಕೊಂಡ ದಾಸಾರ್ಯರು, ಕೌತಾಳದ ಹಿಂದುಳಿದ ಜನಾಂಗದ ಮೇಲೆ ದಯೆ ತೋರಿದರು. ತಾವಾಗಿಯೇ ಅವರಿದ್ದಲ್ಲಿಗೆ ಹೋಗಿ, ಸನುಪದೇಶಗಳಿಂದ ಅವರ ಮನಸ್ಸು ಗಳನ್ನು ಸೆಳೆದರು. ಉಪದೇಶದಿಂದ ಅವರನ್ನು ಜಾಗ್ರತಗೊಳಿಸಿದರು. ಅವರ ದುರಭ್ಯಾಸ ಗಳನ್ನು ದೂರಮಾಡಿ, ವೈಷ್ಣವ ದೀಕ್ಷೆಯನ್ನಿತ್ತರು. ನೇಯಿಕಾರ, ಕಬ್ಬೇರ, ಬೇಡರ ಜಾತಿಯ ಅನೇಕ ಜನರು ಇವರ ಶಿಷ್ಯರಾದರು. ತುರುಕರು, ಲಿಂಗವಂತರು ಸಹ ಇವರ ಶಿಷ್ಯ ಕೋಟಿಯಲ್ಲಿದ್ದರು.

ತಮ್ಮಾರೆಡ್ಡಿ ಎನ್ನುವವರು ದಾಸರಿಗೆ ಸುವಿಶಾಲವಾದ ಒಂದು ಮನೆಯನ್ನು ದಾನ ಮಾಡಿದರು. ಭಗವತ್ಸಂಕಲ್ಪವನ್ನು ನೆನೆದ ದಾಸಾರ್ಯರು ಗುರುರಾಜರನ್ನು ಪ್ರತಿಷ್ಠಿಸಿ ಕೌತಾಳದಲ್ಲಿ ಸ್ಥಿರವಾಗಿ ನಿಂತರು. ದಾಸಾರ್ಯರು ದಿನದ ಹೆಚ್ಚಿನ ಸಮಯವನ್ನು ಪದಪದ್ಯ ಸುಳಾದಿಗಳ ಹಾಗೂ ಸಂಸ್ಕೃತ ಗ್ರಂಥಗಳ ರಚನೆಯಲ್ಲೇ ಕಳೆಯುತ್ತಿದ್ದರು. ಕೆಲವೊಮ್ಮೆ ದಾಸಾರ್ಯರು ನಿದ್ರಾಹಾರಾದಿಗಳಿಲ್ಲದೆ ಗ್ರಂಥಾವಲೋಕನೆಯನ್ನು ಮಾಡು ತ್ತಲೋ ಅಥವಾ ವ್ಯಾಖ್ಯಾನವನ್ನು ಮಾಡುತ್ತಲೋ ಮೂರು–ನಾಲ್ಕು ದಿನಗಳವರೆಗೆ ಕದಲದೆ ಕುಳಿತುಬಿಡುತ್ತಿದ್ದರಂತೆ! ಶೌಚಾದಿಗಳಿಗೂ ಏಳುತ್ತಿರಲಿಲ್ಲವಂತೆ. ಇದು ದಾಸಾರ್ಯರ ಇಂದ್ರಿಯ ನಿಗ್ರಹಕ್ಕೆ ನಿದರ್ಶನವಾಗಿದೆ.

**ಶ್ರೀಕಾಂತನ ಭಜನೆಯೇ ಲೇಸು:**

ಒಮ್ಮೆ ಶ್ರೀರಾಘವೇಂದ್ರರ ಆರಾಧನೆಗೆ ಇನ್ನು ಮೂರು ದಿನಗಳು ಮಾತ್ರ ಉಳಿದಿವೆ. ಜ್ಞಾನ–ಭಕ್ತಿ–ವೈರಾಗ್ಯಗಳೆಂಬ ನಿಜಸಂಪತ್ತಿನಿಂದ ಪೂರ್ಣವಾದ ದಾಸರ ಮನೆ, ಐಹಿಕ ಸಂಪತ್ತಿನಿಂದ ಎಂದೂ ಪೂರ್ಣವಲ್ಲ, ಎಂದೂ ರಿಕ್ತವಲ್ಲ.

"ಆರೋಗ್ಯ ಆಯುಷ್ಯ ಐಶ್ವರ್ಯವೆಂಬ ಈ
ಮೂರು ವಿಧ ವಸ್ತುಗಳು
ನಾರಾಯಣನ ಭಜಕರಾದವರ ಸಾಧನಕೆ
ಪೂರಣವಾಗಿಪ್ಪವೋ"

ಎಂಬ ಗೋಪಾಲದಾಸರ ವಚನದಲ್ಲಿ ಪೂರ್ಣ ನಂಬಿಕೆ ಉಳ್ಳವರು ದಾಸರು. ದಾಸರು ಎಂದೂ ಭವಿಷ್ಯವನ್ನು ಕುರಿತು ಆಲೋಚಿಸಿದವರಲ್ಲ. ಭಗವಂತ ಕರುಣಿಸಿ ಕೊಟ್ಟಿದ್ದನ್ನುಂಡು ತೃಪ್ತರಾಗುತ್ತಿದ್ದರು.

ದಾಸರ ಶಿಷ್ಯರಿಗೆ ಮಾತ್ರ ಆರಾಧನೆ ಹತ್ತಿರ ಬಂದಂತೆಲ್ಲಾ ದಿಗಿಲು ಹೆಚ್ಚಾಯಿತು. ಆರಾಧನೆ ಐದು ದಿನಗಳ ಕಾಲ ನಡೆಯಬೇಕು. ಆರಾಧನೆಗೆ ಬರುವ ಜನರಿಗೇನು ಕಡಿಮೆಯಿಲ್ಲ. ಆರಾಧನೆಗೆ ಬೇಕಾಗುವ ಪದಾರ್ಥಗಳ ವ್ಯವಸ್ಥೆ ಇನ್ನೂ ಆಗಿಲ್ಲ. ಅದಕ್ಕೆ ಬೇಕಾಗುವ ದುಡ್ಡುಸಹ ದಾಸರಲ್ಲಿಲ್ಲ. ದಾಸರು ಮಾತ್ರ ಎಂದೂ ಯಾರನ್ನೂ ಬೇಡುತ್ತಿರಲಿಲ್ಲ. "ದಾಸರು ಆರಾಧನೆಗಾಗಿ ಏಕೆ ಕಷ್ಟ ಪಡಬೇಕು. ನಮ್ಮನ್ನು ಒಂದು ಮಾತು ಕೇಳಿದರೆ ಸಾಕು, ಪ್ರತಿವರ್ಷ ಆರಾಧನೆಯನ್ನು ನಾವೇ ಮಾಡುತ್ತೇವೆ." ಎಂದು ಊರಿನ ಅನೇಕ ಗಣ್ಯವ್ಯಕ್ತಿಗಳು, ದಾಸರ ಶಿಷ್ಯರ ಮುಂದೆ ಹೇಳುತ್ತಿದ್ದರು.

ಎಂದಿನಂತೆ ಸಾಯಂಕಾಲದ ಹೊತ್ತಿಗೆ ದಾಸರ ಮನೆಯಲ್ಲಿ ಭಕ್ತ ಮಂಡಳಿ ಸೇರಿದೆ. ದಾಸರು ಭಾಗವತವನ್ನು ಹೇಳಿದರು. ನಂತರ ಎಲ್ಲರೂ ಸೇರಿ ತಾರತಮ್ಯೋಕ್ತವಾಗಿ ಭಜನೆ ಮಾಡಿದರು. ಮುಖ್ಯ ಶಿಷ್ಯರು ಕೆಲವರು, "ಮುತ್ಯಾ ಆರಾಧನೆ ಎರಡು ದಿನಗಳಲ್ಲಿ ಬಂದು ಬಿಡುತ್ತದೆ. ಮಾಡಬೇಕಾದ ಕೆಲಸ ಬಹಳವಿದೆ. ನೀನು ಒಮ್ಮೆ ಕೇಳಿದರೆ ಸಾಕು. ಊರಿನ ಅನೇಕ ಗಣ್ಯರು ಸಹಕರಿಸಲು ಸಿದ್ಧರಿದ್ದಾರೆ" ಎಂದರು. ದಾಸರು ಕೂಡಲೇ ನಕ್ಕುಬಿಟ್ಟರು. ಮಗುವಿನ ಚಿಂತೆ ತಾಯಿಗಿರುತ್ತದೆ. ಮಗು ಸದಾ ನಿಶ್ಚಿಂತವಾಗಿರುತ್ತದೆ. ಕಾರ್ಯವನ್ನು ಮಾಡಿ ಮಾಡಿಸುವವನು ಭಗವಂತ. ಅಸ್ವತಂತ್ರನಾದ ಜೀವಿ, ಇಲ್ಲದ ಕರ್ತೃತ್ವಭಾರವನ್ನು ಹೊರಬಾರದು.

"ಹಾಡಿದರೆ ಎನ್ನೊಡೆಯನ ಹಾಡುವೆ
ಬೇಡಿದರೆ ಎನ್ನೊಡೆಯನ ಬೇಡುವೆ
ಒಡೆಯಗೆ ಒಡಲನು ತೋರುತ ಎನ್ನ
ಒಡತನ ಬಿನ್ನಹ ಮಾಡುವೆ
ಒಡೆಯ ಪುರಂದರ ವಿಠಲರಾಯನ
ಅಡಿಗಳನು ಸಾರಿ ಬದುಕುವೆ ಸೇರಿ ಬದುಕುವೆ"

ಇದು ನಮ್ಮ ಪುರಂದರ ದಾಸರು ಉಪದೇಶಿಸಿದ ತಾರಕಮಂತ್ರ. ಮಾಡಿದ ಕೆಲಸದಿಂದ ಬೇಡಿದ ಸುಖ ದೊರೆಯದೇ ಇದ್ದರೂ ಚಿಂತೆಯಿಲ್ಲ. ದುಃಖ ಮಾತ್ರ ಬರಬಾರದು. ನರರನ್ನು ಬೇಡಿ ಸುಖಿಸುವುದಕ್ಕಿಂತ ಭಗವಂತನಲ್ಲಿ ಬೇಡಿ ಕಷ್ಟಪಡುವುದೇ ಲೇಸು. ನರರನ್ನು ಬೇಡುವುದರಿಂದ ಇಹದಲ್ಲಿ ಸುಖವಾದಂತೆ ಕಂಡರೂ, ಪಾರತ್ರಿಕ ದುಃಖ ತಪ್ಪದು. ಭಗವಂತನಲ್ಲಿ ಮೂಡಿದ ಯೋಚನೆ ಇಹ ಪರಗಳಲ್ಲಿ ಸುಖವನ್ನು ಕರುಣಿಸುವುದು.

ಏಕಾಂತದಿ ಶ್ರೀಕಾಂತನ ಭಜಿಸಲು
ಲೋಕಾಂತರ ಸುಖ ಪ್ರಾಪ್ತಿ
ಭೂಕಾಂತನ ಭಜಿಸಲು ಮೂಕಾಂತನು ಒಲಿಯನು
ಲೋಕಾಂತರ ನಿರಯಾಪ್ತಿ ||1||

ಶಿರಿರಮಣನ ಪದಯುಗಳವ ಭಜಿಸಲು
ದೊರೆವುದೀಗ ಮೋಕ್ಷ
ನರಜನ ಗುಣಗಳ ವರಣನೆ ಮಾಡಲು
ನಿರಯ ದುಃಖ ಪ್ರತ್ಯಕ್ಷ ||2||

ವೀತದೋಷ ನಿರ್ಭೀತ ಗುರುಜಗ
ನ್ನಾಥ ವಿಠಲರೇಯ
ಮಾತು ಕೇಳಿ ನಿಜಮಾತೆಯ ತೆರದಲಿ
ದೂತನ ಪಿಡಿವನು ಕೈಯ್ಯ ||3||

ಕಾರಣ ಪರರನ್ನು ಯಾಚಿಸುವುದು ಸಲ್ಲ", ಎಂದರು. ದಾಸರ ಉಪದೇಶ ಎಲ್ಲರನ್ನೂ ಜಾಗೃತಗೊಳಿಸಿತು.

ಮರುದಿನ ದಾಸರ ಶಿಷ್ಯರಾದ ತಿರುಮಲರಾಯರೆಂಬ ಜಡ್ಜೀಗಳು ಧಾರವಾಡದಿಂದ ಬಂದರು. ತಿರುಮಲರಾಯರು ರಾಯರ ಆರಾಧನೆಗೆ ಬೇಕಾಗುವ ದುಡ್ಡನ್ನು ದಾಸರ ಅಡಿದಾವರೆಗಳಲ್ಲಿ ಸಮರ್ಪಿಸಿದರು. ದಾಸರು ರಾಯನನ್ನು ಆಶೀರ್ವದಿಸುತ್ತಾ

"ನಂಬಿಕೆಟ್ಟವರಿಲ್ಲವೋ ಈ ಗುರುಗಳ
ನಂಬದೆ ಕೆಡುವರುಂಟೋ
ನಂಬಿದ ಜನರಿಗೆ ಬೆಂಬಲ ತಾನಾಗಿ
ಹಂಬಲಿಸಿದ ಫಲ ತುಂಬಿ ಕೊಡುವವರನ್ನ ||"

ಎಂಬ ಮೂರು ನುಡಿಯ ಕೃತಿಯನ್ನು ಹಾಡಿ ಗುರುಗಳಿಗೆ ಸಮರ್ಪಿಸಿದರು. ಗುರುರಾಜರ ಆರಾಧನೆ ಅತಿ ವಿಜೃಂಭಣೆಯಿಂದ ನಡೆಯಿತು.

**ದಾಸರ ಶಿಷ್ಯ ಸಂಪತ್ತು:**

ಒಮ್ಮೆ ದಾಸಾರ್ಯರಿಗೆ ರಾಘವೇಂದ್ರರ ಪೀಠದಲ್ಲಿ ರಾರಾಜಿಸಿದ ಶ್ರೀ ವರದೇಂದ್ರರು ಸ್ವಪ್ನದಲ್ಲಿ ಕಾಣಿಸಿಕೊಂಡು "ನಿನಗೆ ಯೋಗ್ಯನಾದ ಶಿಷ್ಯ ನಿನಗಾಗಿ ಲಿಂಗಸೂಗೂರಿನಲ್ಲಿ ಕಾಯುತ್ತಿರುವನು; ಅವನು ನಮ್ಮ ಶರಣನು; ಉದ್ಧರಿಸು" ಎಂದು ಆಜ್ಞಾಪಿಸಿದರು.

ಹರಿದಾಸರ ಮತ್ತು ಅವರ ಸಾಹಿತ್ಯಕ್ಕೆ ನೆಲೆವೀಡಾದ ಲಿಂಗಸೂಗೂರಿಗೆ ದಕ್ಷಿಣದಲ್ಲಿ ಸುಮಾರು ಐದು ಮೈಲುಗಳ ದೂರದಲ್ಲಿ ಸಂತೆಕೇಲೂರು ಎಂಬ ಗ್ರಾಮ. ಸ್ವಾಮಿರಾಯರೆಂಬವರು ಆ ಗ್ರಾಮವಾಸಿಗಳು. ಇವರು ಪ್ರಾಣೇಶದಾಸರ ಮೊಮ್ಮಕ್ಕಳಾದ ವಿಜಯರಾಯರ ಮಗಳ ಮಗ ಸ್ವಾಮಿರಾಯರು ವಕೀಲರಾಗಿದ್ದರು. ಆಧ್ಯಾತ್ಮಿಕ ಚಿಂತನೆಯಲ್ಲಿ ಬಹಳ ಒಲವು. ಲಿಂಗಸೂಗೂರಿನ ಅಧಿದೈವವಾದ ಕುಪ್ಪೀ ಭೀಮನ ಏಕಾಂತ ಭಕ್ತರು. ಪ್ರಾಣೇಶದಾಸರಿಗೆ ಒಲಿದು. ಬಂದ ವರದೇಂದ್ರರ ದಾಸಾನುದಾಸರು. ಈ ಸ್ವಾಮಿರಾಯರಿಗೂ ಸಹ ವರದೇಂದ್ರರು ಸ್ವಪ್ನದಲ್ಲಿ ಕಾಣಿಸಿಕೊಂಡು "ಗುರುಜಗನ್ನಾಥ ದಾಸರೇ ನಿನ್ನ ಆತ್ಮೋದ್ಧಾರಕ ಗುರುಗಳು; ನಾಳೆ ನಿನಗಾಗಿ ಇಲ್ಲಿಗೆ ಬರುವರು" ಎಂದು ಸೂಚಿಸಿದರು.

# ಶ್ರೀವರದೇಂದ್ರ ಕರಾವಲಂಬನ ಸ್ತೋತ್ರಂ

ಶ್ರೀಪೂರ್ಣ ಬೋಧ ಗುರುತೀರ್ಥ ಸುದಾಬ್ಧಿಮಗ್ನ
ಶ್ರೀಮಧ್ವನಾಥ ಪದಪಂಕಜ ಸಾರಭೃಂಗ
ಆರಾಧಿತಾಮರವರಾರ್ಚಿತ ಮೂಲರಾಮ
ಮೌನೀಶ ದೇಹಿ ವರದೇಂದ್ರ ಕರಾವಲಂಬಂ ||1||

ಸದ್ವಾದ ವಾಗ್ಗ ಣ ಪರಾಜಿತ ಮಾಯಿಸಂಘ
ಸದ್ವೈಷ್ಣವಾಂಬುಜ ವಿಕಾಸನ ಸತ್ಪತಂಗ
ಸುಜ್ಞಾನ ಭಕ್ತಿ ಸುವಿರಾಗ ಗುಣೈಕಪೂರ್ಣ
ಮೌನೀಶ ದೇಹಿ ವರದೇಂದ್ರ ಕರಾವಲಂಬಂ ||2||

ಮತ್ಕಾಮ ಕೋಪ ಭಯ ಲೋಭ ಸುಸಂಶಯೇರ್ಷ್ಯಾ
ಕಾರ್ಪಣ್ಯ ಯಾಚನ ಮುಖಾಖಿಲ ದೋಷಸಂಘಂ
ವಿಧ್ವಸ್ಯ ವರ್ಧಯ ವಿರಕ್ತಿ ಸುಭಕ್ತಿ ಬೋಧಾನ್
ಸಂದೇಹಿ ಮೇಽದ್ಯ ವರದೇಂದ್ರ ಕರಾವಲಂಬಂ ||3||

ಉದ್ಯದ್ದಿವಾಕರ ಸಮೂಹ ನೀಭೋರು ಕಾಂತಿಂ
ತ್ವಚ್ಚಿತ್ತಮಂದಿರಗತಂ ರಮಣಂ ರಮಾಯಾಃ
ನಿತ್ಯಂ ಸಮೀಕ್ಷ್ಯ ಮುದಮಾಪ ಭವಾನ್ಸಮಾಧೌ
ಮೌನೀಶ ದೇಹಿ ವರದೇಂದ್ರ ಕರಾವಲಂಬಂ ||4||

ಸಂಸಾರಿ ಸಜ್ಜನ ಕುಟುಂಬ ಸುರಕ್ಷಣೇದ್ಯ
ಸಂಬದ್ಧ ಕಂಕಣ ಕರೋಹಿ ಭವಾನ್ಯತೀಂದ್ರಃ
ಆಶ್ಚರ್ಯಮೇತದಿಹ ಲೋಕನರೋತ್ತಮಾನಾಂ
ಸಂದೇಹಿ ಮೇದ್ಯ ವರದೇಂದ್ರ ಕರಾವಲಂಬಂ ||5||

ತ್ವತ್ಪಾದ ಪದ್ಮ ಯುಗಲಾಶ್ರಿತ ಸಜ್ಜನಾನಾಂ
ಆನಂದ ತೀರ್ಥ ಗುರುರಾಟ್ಸುಕೃಪಾಂ ತನೋತಿ
ಶ್ರೀರಾಘವೇಂದ್ರ ಗುರುರಪ್ಯತಿ ತೋಷಮೇತಿ
ಮೌನೀಶ ದೇಹಿ ವರದೇಂದ್ರ ಕರಾವಲಂಬಂ ||6||

ತ್ವತ್ಪ್ರೀತಯೇ ತವ ಗುಣೋತ್ತಮ ರತ್ನಮಾಲಾ
ಸಂಗ್ರಥ್ಯತೇ ಖಲು ಮಯಾ ಸುಮಹಾದರೇಣ
ತ್ವತ್ಪಾದ ಪದ್ಮಯುಗಳೇ ಚ ಸಮರ್ಪಿತೇಯಂ
ಮೌನೀಶ ದೇಹಿ ವರದೇಂದ್ರ ಕರಾವಲಂಬಂ ||7||

ಶ್ರೀರಾಘವೇಂದ್ರ ಪದಪಂಕಜ ಸೌಧಸಾರ
ಸಲ್ಲೇಲಿಹಾನ ಮಧುಪಾಯಿತ ಮಾನಸೇನ
ಸ್ವಾಮ್ಯಾಹ್ವಯೇನ ರಚಿತಾಮಲ ಹಸ್ತದಾನ
ಸ್ತೋತ್ರಂ ಯತೀಂದ್ರ ವರದೇಂದ್ರ ಮುಖೇಂಽಜ ಸಾಸ್ಯಾತ್ ||8||

ತೇನಾಸ್ಯ ಹೃದ್ಗತ ಮರುದ್ವರಗೋ ರಮೇಶಃ
ಪ್ರೀಯೇತ ಪೂಜ್ಯ ಗುರುರಾಜ ಕೃಪಾಬಲೇನ
ಸ್ತೋತ್ರಂ ಪಠನ್ನಿದಮಭೀಪ್ಸಿತಮೇಕ ಚೇತಾ
ಸುಜ್ಞಾನ ಭಕ್ತಿ ವಿರತೀಃ ಲಭತೇಽಚಿರೇಣ||

ಇತಿ ಶ್ರೀಗುರು ಜಗನ್ನಾಥದಾಸಾರ್ಯ ವಿರಚಿತಂ
ಶ್ರೀವರದೇಂದ್ರ ಕರಾವಲಂಬನ ಸ್ತೋತ್ರಂ ಸಂಪೂರ್ಣಂ
|| ಶ್ರೀಕೃಷ್ಣಾರ್ಪಣಮಸ್ತು ||

## ಶ್ರೀಜಗನ್ನಾಥದಾಸಾರ್ಯ ಸ್ತೋತ್ರಂ

ಶ್ರೀಪೂರ್ಣಪ್ರಮತಿ ಪ್ರಣೀತ ಸಮಯ ಕ್ಷೀರಾಬ್ಧಿ ಜೈವಾತೃಕಃ
ಸತ್ತತ್ತ್ವಾವೃತ ಪೂರ್ಣಸಾಂದ್ರಕಿರಣಃ ಸತ್ಕೈರವಾಹ್ಲಾದದಃ
ಸಚ್ಛಿಷ್ಯಾಖ್ಯ ಚಕೋರ ರಕ್ಷಣಕರೋ ವಿಜ್ಞಾನ ಚಂದ್ರಾತಪಃ
ಸದ್ ಹೃದ್ವ್ಯೋಮ ಸುಮಂಡಲಾಶ್ರಿತ ಜಗನ್ನಾಥೋನಿಶಂ
ಪಾತುಮಾಮ್ ||1||

ಯಚ್ಛಾತ್ರಾಪದಶಯ್ಯಸೂನುರಭವತ್ತದ್ವಾಯುನಾವೇಶಿತಃ
ಸೋಭೂಚ್ಛ್ರೀ ಹರಿದಾಸ ಪುಂಗವ ಜಗನ್ನಾಥೇತಿ ನಾಮಾಂಕಿತಃ
ಧಾತ್ರೀದೇವಗಣೋರು ಮೋಕ್ಷಸುಖದೋ ಬಿಂಬಾಪರೋಕ್ಷೀ ದಯಾ–
ಪೂರ್ಣಃ ಸ್ತಂಭಸುಮಂದಿರೇ ಪ್ರವಿಲಸನ್ದೀನಾನ್ಪ್ರಪಾತಿಸ್ವಕಾನ್ ||2||

ಸಂಸಾರವಾರಿ ನಿವಹೇ ಪರಿತೋ ನಿಮಗ್ನಾನ್
ಅಜ್ಞಾನ ದುರ್ಗ್ರಹ ಗೃಹೀತ ಮತೀನ್ ಸ್ವಕೀಯಾನ್
ಆಶಾಂತರಂಗ ಪರಿಲೋಹಿತ ಚಿತ್ತವೃತ್ತೀನ್
ಅನ್ವೀಕ್ಷ್ಯ ತಾನ್ಸವದಿ ಪಾತಿ ಕೃಪಾಕರೋಹಿ ||3||

ರಂಗಪ್ರಸನ್ನ ದಾಸಾರ್ಯೋ ಮನ್ಮನೋಂತರಗೋ ಯತಃ
ಘೂಯಾದ ಭೀಷ್ಟ ದಾತಾಽಸೌ ಇಹಾಮುತ್ರ ಚ ಮೇ ಸದಾ ||4||
ಜಗನ್ನಾಥ ಜಗನ್ನಾಥ ಜಗನ್ನಾಥೇತಿ ನಿತ್ಯಶಃ
ಸದಾಸ್ಮರಂತಿ ಯೇ ಭಕ್ತ್ಯಾ ಜಗನ್ನಾಥಂ ಪ್ರಪದ್ಯತೇ ||5||

ಯತ್ಪಾದಪದ್ಮ ವರರಾಗ ಪರಾಗಲಗ್ನ
ಪಾದೋದಕಂ ಪ್ರತಿದಿನಂ ಶಿರಸಾವಹಂತಿ
ತೇ ಮಾನವಾಃ ಕಿಲ ಜನಾರ್ಜಿತಪಾಪರಾಶಿಂ
ಸಂಮಾರ್ಜ ಯಂತಿ ಸತತಂ ಖಲು ಚಿತ್ರಮೇತತ್ ||6||

ಯತ್ಪಾದ ಕಂಜ ದ್ವಯ ಸೇವನೇನ
ಸಂತಾನ ಸಂಪದ್ಭುವನಾಧಿಪತ್ಯಂ
ಆರೋಗ್ಯ ಮಾಯುಷ್ಯಮನಂತ ಕೀರ್ತಿಂ
ಸುಜ್ಞಾನ ಭಕ್ತಿಂ ಲಭತೇ ನರೋಹಿ ||7||

ಪ್ರತ್ಯಕ್ಷೀಕೃತ ಬಿಂಬೋ ಸೌ ನಿರ್ಮುಕ್ತ ಭವ ಬಂಧನಃ
ಸಂತ್ಯಕ್ತಾಖಿಲ ದುಸ್ಸಂಗಃ ಸದ್ವೃಂದ ಸುಹೃಮತ್ತಮಃ ||8||

ಸರ್ವತ್ರ ವಿಜ್ಞಾನ ವಿಜೃಂಭಿತಾತ್ಮಾ
ಸರ್ವತ್ರ ಸಂವೀಕ್ಷಿತ ಬಿಂಬರೂಪಃ
ಸಂಸಿದ್ಧ ಸಾಷ್ಟಾಂಗ ಸುಯೋಗಸಂಗಃ
ಸಂಸೇವಿನಾಮಿಷ್ಟದ ಕಲ್ಪವೃಕ್ಷಃ ||9||

ಜ್ಞಾನ ವೈರಾಗ್ಯ ಭಕ್ತ್ಯಾದಿ ಶೀತೌದಾರ್ಯ ಗುಣಾನ್ವಿತಃ
ವಾಪ್ತೋಽಪಾಸಾ ಸಮಾಸಕ್ತಃ ಸರ್ವಕರ್ಮ ಸಮರ್ಪಕಃ ||10||

ಹರ್ಯರ್ಪಿತಾಖಿಲ ಶುಭಾಶುಭ ಕರ್ಮಜಾಲಃ
ಸಂಸಿದ್ಧ ಸಪ್ತತಿ ಮಹತ್ತರ ಮಂತ್ರವರ್ಗಃ
ಸಂಸಾಧಿತಾಮರ ಗುಣೋತ್ತಮ ಲೋಕಸೌಖ್ಯಃ
ಸ್ವಾರಾಧಿತಾಮಲ ಚಿರಾತ್ಮಕ ಬಿಂಬರೂಪಃ ||11||

ನಿರ್ಧೂತ ದೋಷಃ ಪರಿಶುದ್ಧಗಾತ್ರಃ
ಸಮೃದ್ಧ ಲಕ್ಷ್ಮೀಪತಿ ಸನ್ನಿಧಾನಃ
ಪ್ರದ್ಯೋತಿತಾತ್ಮ ಪ್ರಭಯಾ ಸುಶೋಭಃ
ಸದ್ಯಸ್ಸದಾ ಸ್ವೀಯ ಜನೈಕಪಾಲಃ ||12||

ಆಧಿವ್ಯಾಧಿಗಣಾಃ ಕುಕರ್ಮಜನಿತಾ ದುಷ್ಟಪ್ರಪಾಕಾತ್ಮಕಾಃ
ನಾಶಂ ಯಾಂತಿ ಪಿಶಾಚ ಭೂತ ಮುಖರಾಃ ಪ್ರೇತೋರಗಾವೃಶ್ಚಿಕಾಃ
ಸಕ್ರಾಶ್ಚೋರ ನೃಪಾಃ ಖಗಾ ಮೃಗವರಾಃ ಕೃದ್ಧಾಯದಾ ಬಾಧಕಾಃ
ದಾಸಾರ್ಯ ಸ್ಮರಣಾದ್ಭವಂತಿ ಸಪದಿ ಪ್ರಧ್ವಸ್ತವಿರ್ಯಾಸ್ತದಾ ||13||

ಪಂಗ್ವಂಧ ಮೂಕ ಬಧಿರಾದಿ ದಶಾಃ ಸಮಸ್ತಾಃ
ಮೂರ್ಛಾ ಸ್ಮೃತಿ ಚ್ಯವನ ಕುಷ್ಠ ಜಲೋದರಾದ್ಯಾಃ

ರೋಗಾ ಮಹಾಂತ ಉರು ಮೃತ್ಯುರಕಾಲಿಕಶ್ಚ
ನಾಶಂ ಪ್ರಯಾಂತಿ ಹರಿದಾಸವರ ಪ್ರಸಾದಾತ್ ||14||

ಪ್ರದಕ್ಷಿಣ ನಮಸ್ಕಾರಾನ್ ಕುರ್ವನ್ ದಾಸವರಾಯ ನಾ
ಸುಖಮೈಹಿಕ ಮಾಪ್ನೋತಿ ಹರಿಲೋಕಂ ಸಮಶ್ನುತೆ ||15||

ಸದಾರಾಶ್ಚ ವಿದಾರಾಶ್ಚ ಸಸುತಾಶ್ಚಾಸುತಾಸ್ತಥಾ
ಅಜ್ಞಾನಿನೋ ಜ್ಞಾನಿನಶ್ಚ ಲಭಂತೇ ಸರ್ವಮೀಪ್ಸಿತಂ ||16||

ಶ್ರೀಜಗನ್ನಾಥ ದಾಸಾರ್ಯೋ ಜಾಗರೂಕತಯಾಸ್ತಿ ಹಿ
ಸರ್ವಾಭೀಷ್ಟಾರ್ಥ ಸಿದ್ಧಿಃ ಸ್ಯಾತ್ ನಾತ್ರ ಕಾರ್ಯಾ ವಿಚಾರಣಾ ||17||

ಯೋವೈ ಸ್ತೋತ್ರಮಿದಂ ಸುನಿರ್ಮಲ ಧಿಯಾ
ದಾಸಾರ್ಯಪಾದಾಂಬು ಜೇ
ಸಲ್ಲಗ್ನಂ ಸುಮನೋ ವಿಧಾಯ ನಿರತಂ ಸ್ನಾತ್ವಾ ಪಠೇನ್ಮಾನತಃ
ಸಾಯಂ ಪ್ರಾತರ ತಂದ್ರಿತಃ ಸುಮತಿಮಾನಷ್ಟಾಧಿಕೈಕಂ ಶತಂ
ಕುರ್ವನ್ನೀಪ್ಸಿತಮರ್ಥ ಜಾತಮಖಿಲಂ ಪ್ರಾಪ್ನೋತಿ ನಿಸ್ಸಂಶಯಂ ||18||

ಸೋಮ ಸೂರ್ಯ ಗ್ರಹೇ ಪುಣ್ಯೇ ಪುಷ್ಯಾರ್ಕಾಮೃತ ಸಿದ್ಧಿಕೇ
ಪಠಿತ್ವಾಷ್ಟೋತ್ತರ ಶತಂ ಭೂತ ಪ್ರೇತಾದಿ ನಾಶಯೇತ್ ||19||

ಸ್ತೋತ್ರೋಕ್ತ ಮಹಿಮಾ ಸತ್ಯಃ ಸಾಕ್ಷೀ ಶ್ರೀ ಹರಿರತ್ರ ಹಿ
ನಾಸ್ತಿ ನಾಸ್ತ್ಯೇ ವಿದುಷಾಂ ಸಂದೇಹಸ್ತು ಕದಾಚನ ||20||

ಸ್ವಾಮಿನಾ ರಾಘವೇಂದ್ರಾರ್ಯ ಪಾದಾಬ್ಜ ಮಧುಪಾಯಿನಾ
ಕೃತಂ ಸ್ತೋತ್ರಂ ಜಗನ್ನಾಥ ದಾಸಾರ್ಯ ಪ್ರೀತಿ ಕಾರಣಂ ||21||

ಜಗತೀ ತಲ ವಿಖ್ಯಾತಂ ಜಗದಾಮೋದ ದಾಯಕಂ
ಜಗದೀಶ ಪದಾಸಕ್ತಂ ಜಗನ್ನಾಥಗುರುಂ ಭಜೇ ||22||

ಇತೀ ಶ್ರೀಗುರು ಜಗನ್ನಾಥದಾಸಾರ್ಯ ಕೃತಂ
ಜಗನ್ನಾಥಾರ್ಯ ಸಂಪೂರ್ಣಂ
|| ಶ್ರೀಕೃಷ್ಣಾರ್ಪಣಮಸ್ತು ||

## ಶ್ರೀಜಗನ್ನಾಥದಾಸಾರ್ಯ ಕರಾವಲಂಬನ ಸ್ತೋತ್ರಂ

ಶ್ರೀರಂಗನಾಥ ಪದ ಪಂಕಜ ಮತ್ತ ಭೃಂಗ
ಶ್ರೀ ಮಾಮನೋರಮ ವಿಕಾಸಿ ನಿಜಾಂತರಂಗಃ
ಸುಜ್ಞಾನ ಭಕ್ತಿ ಸುವಿರಾಗ ಭವತ್ಕದಾಸ್ಯಂ
ದತ್ವಾ ಪ್ರಪಾಹಿ ದಯಯಾ ಜಗದೀಶದಾಸ ||1||

ಶಾಸ್ತ್ರಾರ್ಥ ಸಾರ ಕವಿತಾಗಮ ಬೋಧದಸ್ತ್ವಂ
ವಿದ್ಯಾಧಿಕಾರ್ಥಿತ ವಿಶೇಷ ಸುಖಾತ್ಮ ಮೋಕ್ಷಂ
ಸಂದಾಯ ಶಾಂತಿಮಮಲಾತ್ಮ ಮತಿಂ ವಿಧಾಯ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||2||

ವೇದಾದಿ ವೇದ್ಯ ಹರಿ ಸದ್ಗುಣ ಗಾನಲೋಲ
ವೇದಾರ್ಥಸಾರ ಪರತತ್ವವಿದಾಂ ವರಿಷ್ಠ
ವೇದಾರ್ಥಸಾರ ಪರಿಬೃಂಹಿತ ಶಾಸ್ತ್ರಕರ್ತಃ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||3||

ಸಂಸಾರ ಸಾಗರ ಸಮುತ್ತರಣೈಕ ಪೋತ
ಸಂಮೋದ ಬುದ್ಧಿ ಸುವಿರಾಗ ಸುಭಕ್ತಿ ದಾತಃ
ಸತ್ಸಾಧುಸಂಘ ಸುಕರಾರ್ಚಿತ ಪಾದಪದ್ಮ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||4||

ಧಾತ್ರೀಸುರಾವಳಿ ಸುಕಾಮದ ಕಲ್ಪಭೂಜ
ಸಂಸೇವಕಾವಳಿ ಸುಕಾಮದ ಕಾಮಧೇನೋ
ಮಾತಾ ಪಿತೃ ಸ್ವಜನ ಸೋದರ ಪುತ್ರರೂಪ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||5||

ಪ್ರೇತಾದಿ ಭೂತ ಘನಭೈರವ ಯಕ್ಷ ರಕ್ಷಃ
ಕುಷ್ಠಾಮಯ ಪ್ರಭೃತಿಕೇಂದ್ರಿಯ ದೋಷ ಸಂಘಾನ್
ವಿಧ್ವಸ್ಯ ನಿತ್ಯಮುಭಯತ್ರ ಫಲಪ್ರದಾತಃ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||6||

ತ್ವತ್ಪಾದಕಂಜ ಭಜನೋದ್ಧತ ಪಾಪಮರ್ತ್ಯಃ
ಸಂಸಾಧಿತಾಮಲ ವಿರಾಗ ಸುಭಕ್ತಿ ಬೋಧಃ
ಸ್ವಾತ್ಮನ್ಯವಾಪ್ತ ಸುವಿರಾಜಿತ ಬಿಂಬರೂಪಃ
ಸ್ಯಾಂ ದೇವದಾಸ ಮಮ ದೇಹಿ ಕರಾವಲಂಬಂ ||7||

ದೀನಾರ್ತಿ ಪುಂಜ ದಲನೋದ್ಯತ ಭಾನುತೇಜಃ
ಪ್ರದ್ಯೋತಿತಾತ್ಮ ಹೃದಯಾಂಬರ ಸನ್ನಿವಾಸ
ಮಧ್ವಾಗಮಾಂಬುಜ ವಿಕಾಸನ ಚಿತ್ರಭಾನೋ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||8||

ನಿರ್ಧೂತ ಹೇಯ ಭವತಾಪ ತರಂಗಜಾಲ
ಶ್ರೀರಂಗನಾಥ ಗುಣಸಾರ ಗೃಹಾಂತರಂಗ

ಸತ್ಪಾದಪಜಾತ ಪರಿರಕ್ಷಣ ದೀಕ್ಷಿತಾಕ್ಷ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||9||

ಸಚ್ಛಾಸ್ತ್ರಸಾರ ವರತತ್ವ ಪರಾತ್ಮವಿದ್ಯಾ
ಸಂವರ್ಧಿತಾಮಲ ಸುಖಾತ್ಮಕ ಮೋದದಾನೆ
ಮಂದಾರ ಇತ್ಯ ಮರಧೇನುರಿತಿ ಪ್ರಸಿದ್ಧಕಿ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||10||

ಯತ್ತ್ವೇ ಮುಖಾಂಬುಜ ಸುಧಾರಸಮಾದರೇಣ
ಸಂಸೇವ್ಯ ಸಂದಧತಿ ಮೋದಮಶೇಷಲೋಕಾಃ
ಪಾಯಾಸ್ತ್ವಮತ್ರ ಚ ವರತ್ರ ಫಲಪ್ರದಾತಾ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||11||

ತ್ವತ್ಪಾದಪದ್ಮ ಮಹಿಮ ಶ್ರವಣಂ ಸುಧೀನಾಂ
ತ್ವನ್ನಾಮರೂಪ ಗುಣಕಾರ್ಯ ಸುಕೀರ್ತನಂ ಚ
ನಿತ್ಯಂ ಭವೇದ್ದುರಿತ ಕೋಟಿ ವಿನಾಶ ಹೇತುಃ
ಶ್ರೀರಂಗದಾಸ ಮಮ ದೇಹಿ ಕರಾವಲಂಬಂ ||12||

ಇತಿ ಶ್ರೀರಾಘವೇಂದ್ರಾರ್ಯ ಚರಣದ್ವಯ ಸೇವಿನಾ
ಕರಾವಲಂಬನ ಸ್ತೋತ್ರಂ ಕೃತಂ ವೈ ಸ್ವಾಮಿನಾ ಮಯಾ ||13||

ಇತಿ ಶ್ರೀಗುರು ಜಗನ್ನಾಥದಾಸಾರ್ಯ ವಿರಚಿತಂ ಕರಾವಲಂಬನ ಸ್ತೋತ್ರಂ ಸಂಪೂರ್ಣಂ.

||ಶ್ರೀಕೃಷ್ಣಾರ್ಪಣಮಸ್ತು||

## ಮೊದಲನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕುತರಾದವರಿದನು ಕೇಳುವದು॥

ಶ್ರೀರಮಣ ಶಿರಿದೇವಿ ಬೊಮ್ಮ ಸ–
ಮೀರ ವಾಣೀ ಭಾರತೀ ವಿಪ
ನೂರುದಶಮುಖ ಉರಗಭೂಷಣ ರಾಣಿಯರ ಪದಕೆ
ಸಾರಿ ನಮನವು ಮಾಡಿ ಭಕ್ತ್ಯನು–
ಸಾರ ಗುರುವರ ರಾಘವೇಂದ್ರರು–
ದಾರ ವಿಜಯವ ಪೇಳ್ವೆ ಸುಜನರು ಕೇಳಿ ಮೋದಿಪದು 1

ಘನ್ನ ಗುಣಗಣರನ್ನ ನಿಲಯಾ–
ಪನ್ನಪಾಲ ವಿಶಾಲ ಮಹಿಮಾ
ಎನ್ನ ಯೋಗ್ಯತೆ ತಿಳಿದು ತಿಳಿಸಿದ ತನ್ನ ಮಹಮಹಿಮೆ
ಮುನ್ನ ಪೇಳೆಲೊ ಎಂದು ಅಭಯವ
ಘನ್ನ ಕೃಪೆಯಲಿ ನೀಡಿ ಕೃತಿಯನು
ಎನ್ನ ಮನದಲಿ ನಿಂತು ಪೇಳಿದ ತೆರದಿ ಪೇಳಿದೆನು 2

ವೇದ–ಶಾಸ್ತ್ರ–ಪುರಾಣ–ಕಥೆಗಳ–
ನೋದಿ ಕೇಳ್ದವನಲ್ಲ ತತ್ತ್ವದ
ಹಾದಿ ತಿಳಿದವನಲ್ಲ ಬುಧ ಜನಸಂಗ ಮೊದಲಿಲ್ಲ
ಮೋದ ತೀರ್ಥ ಪದಾಬ್ಜಮಧುಕರ–
ರಾದ ಶ್ರೀ ಗುರು ರಾಘವೇಂದ್ರರ
ಪಾದ ಪದ್ಮಪರಾಗ ಲೇಶದ ಸ್ಪರ್ಶ ಮಾತ್ರದಲಿ 3

ಕೃತಿಯ ಮಾಡುವ ಶಕುತಿ ಪುಟ್ಟಿತು
ಮತಿಯ ಮಾಂದ್ಯವು ತಾನೆ ಪೋಯಿತು
ಯತನವಿಲ್ಲದೆ ಸಕಲ ವೇದಗಳರ್ಥ ತಿಳಿದಿಹದು
ಪತಿತಪಾವನರಾದ ಗುರುಗಳ
ಅತುಳಮಹಿಮೆಯನಾವ ಬಲ್ಲನು
ಮತಿಮತಾಂವರ ಬುಧರಿಗಸದಳ ನರರ ಪಾಡೇನು 4

ಪರಸು ಸೋಕಲು ಲೋಹ ಹೇಮವು
ಅರಸು ಮುಟ್ಟಲು ದಾಸಿ ರಂಭೆಯು
ಸರಸ ಗುರುಗಳ ಪಾದಧೂಳಿಯ ಸ್ಪರಿಶ ಮಾತ್ರದಲಿ
ಪರಮ ಪಾಮರನಾದ ನರನೂ
ಹರನ ತೆರದಲಿ ಜ್ಞಾನಯೆಯುದ್ಧವ
ದುರಿತರಾಶಿಯ ದೂರಮಾಡುವ ದುರಿತವನದಾವ 5

ಆವ ಗುರುಗಳ ಪಾದತೋಯದಿ
ದೇವ ನದಿ ಮೊದಲಾದ ತೀರ್ಥಗ–
ಳಾವ ಕಾಲದಲಿಂದ ತಾವೇ ಬೆರೆತು ನಿಂತಿಹವೋ
ಶ್ರೀವರನು ತಾ ಚಕ್ರರೂಪದಿ
ಜೀವರೋತ್ತಮ ಪ್ರಾಣ ದೇವನು
ಸಾವಿರಾಸ್ಯನೆ ರಾಯರೆಂದೂ ಸುರರು ನಿಂತಿಹರು 6

ಅಲವ ಬೋಧ ಸುತೀರ್ಥ ಮುನಿಗಳು
ಹಲವು ಕಾಲದಿ ನಿಂತು ಜನರಘ–
ವಳಿದು ಕೀರುತಿಯಿತ್ತು ಲೋಕದಿ ಖ್ಯಾತಿ ಮಾಡಿಹರು
ಸುಲಭ ಸಾಧ್ಯನು ತನ್ನ ಜನರಿಗೆ
ಫಲಗಳೀಯ(ವ)ನು ಸರ್ವ ಜನರಿಗೆ
ಒಲಿಯಸೀತನು ಎಂದಿಗಾದರು ಮಂದಭಾಗ್ಯರಿಗೆ 7

ಈತನೊಲಿಯಲು ಪ್ರಾಣನೊಲಿವನು
ವಾತನೊಲಿಯಲು ಹರಿಯು ಒಲಿವಾ
ಈತ ಸಕಲಕೆ ಮುಖ್ಯಕಾರಣನಾಗಿ ಇರುತಿಪ್ಪ
ಈತನೇ ಬಲವಂತ ಲೋಕದಿ
ಈತನೇ ಮಹಾದಾತ ಜನರಿಗೆ
ಈತನಂಘ್ರಿ ಸರೋಜ ಕಾಮಿತ ಫಲಕೆ ಕಾರಣವು 8

ರಾಯರಂಘ್ರಿಸುತೋಯ ಕಣಗಳು
ಕಾಯದಲಿ ಸಲ್ಲಗ್ನವಾಗಲು
ಹೇಯಕುಷ್ಟಭಗಂಧರಾದಿ ಸಮಸ್ತವ್ಯಾಧಿಗಳು
ಮಾಯ ಮಯಭೂತಾದಿ ಬಾಧವ–
ಪಾಯ ತಾನೇ ಪೊಂದಿಪೋಪದ–
ಜೇಯ ತನ್ನಯ ಶಕ್ತಿಯಿಂದಲಿ ಕಾರ್ಯ ಮಾಡುವನು 9

ದೃಷ್ಟಿಯೆಂಬ ಸುವಜ್ರದಿಂದಲಿ
ಬೆಟ್ಟದಂತಿಹ ಪಾಪರಾಶಿಯು
ಅಟ್ಟಿಕಳಿಸುವ ದೂರದೇಶಕೆ ದುರಿತಗಜಸಿಂಹ
ಮುಟ್ಟಿ ತನಪದ ಸೇವೆಮಾಡಲು
ಇಷ್ಟ ಕಾಮಿತ ಸಿದ್ಧಿನೀಡುವ
ಕಷ್ಟಕೋಟಿಯು ಸುಟ್ಟು ಬಿಡುವನು ಸರ್ವಕಾಲದಲಿ 10

ಇಂದು ಸೂರ್ಯಗ್ರಹಣಪರ್ವವು
ಬಂದ ಕಾಲದಿ ನೇಮಪೂರ್ವಕ
ಪೊಂದಿದಾಸನದಲ್ಲಿ ಕುಳಿತಷ್ಟೋತ್ತರಾವರ್ತಿ
ಒಂದೆ ಮನದಲಿ ಮಾಡೆ ಗುರುವರ
ನಂದದಲಿ ಸಕಲಾರ್ಥ ಸಿದ್ಧಿಯು
ತಂದುಕೊಡುವನು ತನ್ನ ಸೇವಕ ಜನರ ಸಂತತಿಗೆ 11

ತನಯರಿಲ್ಲದ ಜನಕೆ ಸುತರನು
ಮನಿಯು ಮಾನಿನಿ ವೃತ್ತಿ ಕ್ಷೇತ್ರವು
ಕನಕ ಧನ ಸಂತಾನ ಸಂಪತು ಇನಿತೆ ಫಲಗಳನು
ಜನ ಸಮೂಹಕೆ ಇತ್ತು ತೋಷದಿ
ವಿನಯಪೂರ್ವಕ ಸಲಿಸಿ ಕಾವನು
ಅನುಪಮೋಪಮ ಚರಿತ ಸದ್ಗುಣ ಭರಿತ ಯತಿನಾಥ 12

ಶಾಪನುಗ್ರಹಶಕ್ತನೊಬ್ಬನು
ಲೋಪವಾಗದು ನುಡಿದ ವಾಕ್ಯವು
ವ್ಯಾಪಕನು ತಾನಾಗಿ ಇಪ್ಪನು ಸರ್ವಕಾಲದಲಿ
ಕೋಪವಿಲ್ಲವೊ ಜ್ಞಾನಮಯ ಸುಖ–
ರೂಪ ಸಂತತ ಸಾಧುವರ್ತಿಯು
ಪಾಪ ನಾಶಕ ಕವಿಕುಲೋತ್ತಮ ಪುಣ್ಯಮಯ ಕಾಯ 13

ಭೂತ ಪ್ರೇತ ಪಿಶಾಚಿ ಯಕ್ಷಿಣಿ
ಭೀತಿ ಬಡಕರ ಭೀತಿ ಬಿಡಿಸೀ
ಮಾತೆಯಂದದಿ ಪೊರೆವ ಸಂತತ ಭೀತಿವರ್ಜಿತನು
ದಾತ ಎನ್ನಯ ಮಾತು ಲಾಲಿಸೊ
ಯಾತಕೀ ತೆರ ಮಾಡ್ದ್ಯೋ ಗುರುವರ
ಪೋತ ನಾ ನಿನಗಲ್ಲೆ ಯತಿಕುಲನಾಥ ಸರ್ವಜ್ಞ 14

ಮಾತ ಪಿತ ಸುತ ಭ್ರಾತ ಬಾಂಧವ
ದೂತ ಸತಿ ಗುರು ನಾಥ ಗತಿ ಮತಿ
ನೀತ ಸಖ ಮುಖವ್ರಾತ ಸಂತತ ಎನಗೆ ನೀನಯ್ಯ
ಭೂತಿದಾಯಕ ಸರ್ವಲೋಕದಿ
ಖ್ಯಾತ ಗುರುಪವಮಾನ ವಂದಿತ
ದಾತ ಗುರುಜಗನ್ನಾಥವಿಠಲನ ಪ್ರೀತಿ ಪಡೆದಿರುವಿ

ಶ್ರೀ ರಾಘವೇಂದ್ರವಿಜಯದಲ್ಲಿ ಮೊದಲನೆಯ ಸಂಧಿಯು
ಸಮಾಪ್ತವಾಯಿತು.

# ಎರಡನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕ್ತರಾದವರಿದನು ಕೇಳುವದು॥

ಆದಿಯುಗದಲಿ ಧರಣಿ ಮಾನಿನಿ
ಆದಿ ದೈತ್ಯರ ಬಾಧೆಗಾರದೆ
ವೇದನಂಘ್ರಿಯ ಸಾರ್ದು ತನ್ನಯ ವ್ಯಸನ ಪೇಳಿದಳು
ಆದಿಕವಿ ಚತುರಾಸ್ಯನೀಪರಿ
ಮೇದಿನೀ ಶ್ರಮವಚನ ಲಾಲಿಸಿ
ಬಾಧೆ ಪರಿಹರ ಮಾಳ್ಪೆನೆಂದೂ ನುಡಿದು ತಾ ನಡೆದ 1

ಶ್ವೇತದಿವಿಯನು ಸಾರ್ದು ಲಕುಮಿಸ–
ಮೇತಹರಿಯನು ತುತಿಸಿ ಭೂಮಿಯ
ಭೀತಿ ತಾ ಪರಿಹರಿಸೊಗೋಸುಗ ಹರಿಯ ಬೆಸಗೊಂಡ
ನಾಥ! ದಿತಿಜರ ಭಾರವತಿಶಯ
ಘಾತಿಪರು ತಾವಾರೊ ತಿಳಿಯೆನು
ತಾತ! ನೀ ಪರಿಹಾರ ಮಾಡೀ ಭೀತಿ ಬಿಡಿಸುವದು 2

ಪುರುಟ ಲೋಚನ ಸ್ವರ್ಣ ಕಶಿಪು
ಉರುಟು ದೈತ್ಯರು ಸರ್ವಜನರನ
ಚರಟ ಹಾರಿಸಿ ಸಕಲ ಲೋಕಕೆ ದುಃಖ ಕೊಡುತಿಹರು
ಉರುಟು ಮಾತುಗಳಲ್ಲ ಶಿರದಲಿ
ಕರದ ಸಂಪುಟ ಮಾಡಿ ಬೇಡುವೆ
ಜರಠ ದೈತ್ಯರ ತರಿದು ಭೂಮಿಗೆ ಸುಖವ ನೀಡೆಂದೆ 3

ಚತುರವದನನ ವಚನ ಕೇಳೀ
ಚತುರ ಭುಜ ತಾನಾದ ಹರಿಯೂ
ಚತುರ ತನದಲಿ ನಾನೆ ಸಂಹರ ಮಾಳ್ಪೆ ಚತುರಾಸ್ಯ
ಧೃತದಿ ನಡೆಯಲೊ ನಿನ್ನ ಸ್ಥಾನಕೆ
ಯತನ ಮಾಡುವೆ ಶೀಘ್ರವಾಗೀ
ಜತನ ಮಾಡೆಲೊಯನ್ನ ವಚನವು ಎಂದಿಘುಸಿಯಲ್ಲ 4

ತಾನೆ ಅವತರ ಮಾಡೊಗೋಸುಗ
ಏನು ನೆವನವಮಾಡಲೆಂದೂ
ನಾನ ಯೋಚನೆಮಾಡಿ ಯುಕುತಿಯ ತೆಗೆದ ಹರಿ ತಾನು
ಸಾನು ರಾಗದಿ ಸೇವೆ ಮಾಡುತ–
ಧೀನದೊಳಗಿರುತಿಪ್ಪ ವಿಷ್ವ–
ಕ್ಸೇನನಾಮಕ ವಾಯುಪುತ್ರನು ಶೇಷನವತಾರ 5

ಎಂದಿಗಾದರು ನಿನ್ನೊಳಿಪ್ಪೆನು
ನಂದದಲೆ ನಾ ಪಂಚ ರೂಪದಿ
ಕುಂದದಲೆ ತಾ ಮಿನುಗುತಿಪ್ಪದು ಪ್ರಾಣನಾವೇಶ
ಪೊಂದಿ ಶೋಭಿತನಾಗಿ ಈ ಪುರ–
ದಿಂದ ಜಾಗ್ರತಿ ಭೂಮಿತಳಕೇ
ಇಂದು ನೀ ನಡಿಯೆಂದು ಶ್ರೀಹರಿ ನುಡಿದ ದೂತನಿಗೆ 6

ಸ್ವಾಮಿ ಲಾಲಿಸೊ ನಿನ್ನ ಶುಭತಮು–
ಧಾಮಶಿರಿ ವೈಕುಂಠದಿಂದಲಿ
ಆ ಮಹತ್ಮರ ದುಃಖ ನೀಡುವ ಲೋಕ ನಾನೊಲ್ಲೆ
ಶ್ರೀ ಮನೋಹರ ದೂತನೊಚನವ
ಸೀಮವಿಲ್ಲದೆ ಎನಗೆ ನುಡಿದತಿ
ತಾಮಸಾತ್ಮಕ ದೈತ್ಯ ಕುಲದಲ್ಲಿ ಜನಿಸು ಪೋಗೆಂದ 7

ಎನ್ನ ಶಾಪದಲಿಂದ ನೀ ತ್ವರ
ಮುನ್ನ ಪುಟ್ಟಿಲೊ ದೈತ್ಯರಾಗ್ರಣಿ
ಸ್ವನ್ನ ಕಶಿಪುನ ಧರ್ಮಸತಿಯಳ ಜಠರ ಮಂದಿರದಿ
ನಿನ್ನಗೋಸುಗ ನಾನೆ ನರಮೃಗ
ಘನ್ನ ರೂಪವ ತಾಳಿ ಅಸುರನ
ಚನ್ನವಾಗೀ ಸದೆದು ಲೋಕದಿ ಕೀರ್ತಿ ನಿನಗಿಪ್ಪೆ 8

ಅಂದ ಶ್ರೀಹರಿ ನುಡಿಯು ಮನಕೀ
ತಂದು ವಿಷ್ವಕ್ಸೇನ ಮೊದಲೇ
ಬಂದು ಜನಿಸಿದನಸುರ ನಿಜಸತಿಯುುದರದೇಶದಲಿ
ತಂದೆ ಸಂಭ್ರಮದಿಂದ ತನ್ನಯ
ಕಂದನನು ತಾ ಊರು ದೇಶದಿ
ತಂದು ಕೂಡಿಸಿ ಕೇಳ್ದ ಸುರರೊಳಗಾವನುತ್ತಮನು 9

ವಾರಿಜಾಸನ ವಿಷ್ಣು ಪಶುಪತಿ
ಮೂರು ಜನರೊಳಗಾವನುತ್ತಮ
ಧೀರ ನೀ ಪೇಳೆನಗೆಯೆನುತಲಿ ತಾನೆ ಬೆಸಗೊಂಡ
ಸೂರಿ ತಾ ಪ್ರಹ್ಲಾದ ನುಡಿದನು
ನಾರ ಅಯನನ ಉಳಿದು ಸುರರೊಳು
ಆರು ಉತ್ತಮರಿಲ್ಲವೆಂದಿಗು ಹರಿಯೆ ಉತ್ತಮನು 10

ಸರ್ವಗುಣ ಗಣ ಪೂರ್ಣ ಸರ್ವಗ
ಸರ್ವಪಾಲಕ ದೇವ ಸರ್ವಗ
ಸರ್ವರಂತರ್ಯಾಮಿ ತಾನೆ ಸ್ವತಂತ್ರ ಪರಿಪೂರ್ಣ
ಶರ್ವಮೊದಲಾದಮರರೆಲ್ಲರು
ಸರ್ವಕಾಲದಿ ಹರಿಯಧೀನರು
ಸರ್ವಲೋಕಕೆ ಸಾರ್ವಭೌಮನು ಲಕುಮಿ ವಲ್ಲಭನು 11

ಸುತನ ಮಾತನು ಕೇಳಿ ದೈತ್ಯರ
ಪತಿಯು ಕೋಪದಿ ತೋರಿಸೆನಲೂ
ವಿತತನಾಹರಿ ಸರ್ವದೇಶದಿ ಇರುವ ನೋಡೆಂದಾ
ಪತಿತ ದೈತ್ಯನು ಕಂಬ ತೋರೀ
ಯತನ ಪೂರ್ವಕ ಬಡಿಯಲಾಕ್ಷಣ
ಶ್ರೀತನ ವಚನವ ಸತ್ಯಮಾಡುವೆನೆಂದು ತಾ ಬಂದ 12

ನರಮೃಗಾಕೃತಿತಾಳಿ ದುರುಳನ
ಕರುಳು ಬಗಿದಾ ನಾರಸಿಂಹನು
ತರುಳ ನಿನ್ನನು ಪೊರೆದನಾಗಲೆ ಕರುಣವಾರಿಧಿಯು
ಸರಳ ಎನ್ನನು ಕಾಯೊ ಭವದೊಳು
ಮರುಳುಮತಿ ನಾನಾಗಿ ಸಂತತ
ಇರಳುಹಗಲೊಂದಾಗಿ ಪರಿಪರಿಮಾಳ್ಪೆ ದುಷ್ಕರ್ಮ 13

ಆ ಯುಗದಿ ಪ್ರಹ್ಲಾದನಾಮಕ
ರಾಯನೆನಿಸೀ ಹರಿಯ ಭಜಿಸೀ
ತೋಯನಿಧಿ ಪರಿವಸನ ಮಂಡಲವಾಳ್ದೆ ಹರಿಬಲದಿ
ರಾಯಕುಲದಲಿ ಸಾರ್ವಭೌಮನ–
ಜೇಯ ಮಹಿಮನು ಸತತ ಜಗದಲ–
ಮೇಯ ದಿಷಣನುಯೆಂದು ಸುರಮುನಿ ಮಾಡ್ದನುಪದೇಶ 14

ಗರ್ಭದಲೆ ಪರತತ್ತ್ವ ಪದ್ಧತಿ
ನಿರ್ಭಯದಿ ನೀ ತಿಳಿದು ಅದ್ವೈ–
ದರ್ಭಿರಮಣನೆ ಸರ್ವರುತ್ತಮನೆಂದು ಸ್ಥಾಪಿಸಿದೆ
ದುರ್ಭಗಾಧಿಕವಾದವಗೆ ಸಂ–
ದರ್ಭವಾಗೊದೆ ನಿನ್ನ ಸೇವಾ
ನಿರ್ಭರಾಗದು ನಿನ್ನ ಜನರಿಗೆ ಸುಲಭವಾಗಿಹದೋ 15

ದಿತಿಜ ಬಾಲರಿಗೆಲ್ಲ ತತ್ತ್ವದಿ
ಮತಿಯ ಪುಟ್ಟಿಸಿ ನಿತ್ಯದಲಿ ಶ್ರೀ–
ಪತಿಯೆ ಸರ್ವೋತ್ತಮನುಯೆಂಬೀ ಜ್ಞಾನ ಬೋಧಿಸಿದೆ
ಇತರ ವಿಷಯ ವಿರಕ್ತಿ ಪುಟ್ಟಿತು
ಮತಿ ವಿಚಾರಾಸಕ್ತರಾದರು
ಸಿತನಸುತರೂ ಪೇಳ್ದುದೆಲ್ಲನು ಮನಕೆ ತರಲಿಲ್ಲ 16

ನಿನ್ನ ಮತವನುಸರಿಸಿ ಬಾಲರು
ಘನ ಬೋಧ ಸುಭಕ್ತಿ ಪಡೆದರು
ಧನ್ಯರಾದರು ಹರಿಯ ಭಕುತರುಯೆನಿಸಿ ತಾವಂದು
ನಿನ್ನ ಮಹಿಮೆಗೆ ನಮನ ಮಾಡುವೆ
ಎನ್ನ ಪಾಲಿಸೊ ಭವದಿ ಪರಿಪರಿ
ಬನ್ನ ಬಡುವೆನೊ ದಾರಿಗಾಣದೆ ನಿನ್ನ ನಂಬಿದೆನೊ 17

ಪರಮ ಪಾವನ ರೂಪಿ ನೀನೂ
ಹರಿಯ ಶಾಪದಿ ಅಸುರಭಾವವ
ಧರಿಸಿ ದೈತ್ಯನುಯೆನಿಸಿಕೊಂಡೆಯೊ ಸುರವರೋತ್ತಮನು
ಹರಿಗೆ ಹಾಸಿಗೆಯಾದ ಕಾರಣ
ಹರಿವಿಭೂತಿಯು ಸನ್ನಿಧಾನವು
ನಿರುತ ನಿನ್ನಲಿ ಪೇರ್ಚಿ ಮೆರೆವದು ಮರುತನೊಡಗೂಡಿ 18

ಪ್ರಾಣನಿಹ ಪ್ರಹ್ಲಾದನೊಳಗೆ ಅ–
ಪಾನ ನಿಹ ಸಹ್ಲಾದನೊಳು ತಾ
ವ್ಯಾನನಿಹ ಕಹ್ಲಾದನೊಳುದಾನ ನಿಂತಿಹನೂ
ದಾನವಾಗ್ರಣಿ ಹ್ಲಾದನೊಳು ಸ–
ಮಾನ ತಾನನುಹ್ಲಾದನೊಳಗೇ
ಶ್ರೀನಿವಾಸನ ಪ್ರಾಣ ಭಜಿಸುವ ಪಂಚರೂಪದಲಿ 19

ಐವರೊಳು ಹರಿ ವಾಯು ಕರುಣವು
ಈ ವಿಧಾನದಿ ಪೇರ್ಚಿ ಇರುವುದು
ಆವ ಜನ್ಮದ ಪುಣ್ಯಫಲವೋ ಆರಿಗಳವಲ್ಲ
ದೇವ ದೇವನು ನಿನ್ನಧೀನನು
ಆವ ಕಾಲಕು ತೊಲಗನಾತನು
ಸೇವಕಾಗ್ರಣಿ ತೆರದಿ ನಿಮ್ಮನು ಕಾದುಕೊಂಡಿಹನು 20

ಲಕುಮಿ ನಿನ್ನನು ಎತ್ತಿತೋರಲು
ಸಕಲ ಸುರವರರೆಲ್ಲ ನೋಡಲು
ಭಕುತವತ್ಸಲನಾದ ನರಹರಿ ನಿನಗೆ ವಶನಾಗೆ
ವ್ಯಕುತವಾಯಿತು ನಿನ್ನ ಮಹಿಮೆಯು
ನಿಖಿಳ ಸುರವರರೆಲ್ಲ ಪೊಗಳಲು
ಭಕುತಿ ಪೂರ್ವಕ ಕರೆದರಾಗಲೆ ಕುಸುಮ ವೃಷ್ಟಿಯನು 21

ದೇವ ದುಂದುಭಿ ವಾದ್ಯನಭದಲಿ
ತೀವಿತಾಗಲೆ ದಿವಿಜರೆಲ್ಲರು
ಭಾವಿಸೀ ಪರಿ ಜಯತು ಜಯಜಯವೆನುತ ನಿಂತಿಹರು
ಈ ವಸೂಮತಿ ತಳಕೆ ನರವರ
ದೇವ ಪಟ್ಟವಗಟ್ಟಿ ರಾಜ್ಯವ
ಓವಿಸೂವದುಯೆಂದು ಸುರಗುರು ಬೊಮ್ಮ ಪೇಳಿದನು 22

ರಾಯ ರಾಜ್ಯವ ಮಾಡುತಿರಲ
ನ್ಯಾಯವಿಲ್ಲದೆ ಸರ್ವಜನರೂ
ನ್ಯಾಯ ಮಾರ್ಗದಿ ನಡೆದರಾಗಲೆ ರಾಜನಾಜ್ಞದಲಿ
ಮಾಯ ಠಕ್ಕು ಠವಳಿ ಮಸಿಗಳ–
ಪಾಯ ಮೊದಲಾಗಿಪ್ಪ ದೋಷವು
ಕಾಯ ಜಾತನ ಉರುಬು ಜನರಲಿ ಜನಿಸದಾಪುರದಿ 23

ರಾಜ ಕಾರ್ಯವ ಭರದಿ ಮಾಡುತ
ವಾಜಿ ಮೇಧದ ಶತಕ ಪೂರ್ತಿಸಿ
ರಾಜ ರಾಜರ ತೇಜೋನಿಧಿ ತಾನೆನಿಸಿ ರಾಜಿಸಿದ
ಮಾಜದಲೆ ಶ್ರೀಹರಿಯ ಪದಯುಗ
ಪೂಜೆ ಮಾಡಿದ ಪುಣ್ಯಬಲದಿ ವಿ–
ರಾಜಮಾನ ಮಹಾನುಭಾವನು ಲೋಕ ಮೂರರಲಿ 24

ಸಾಧು ಜನತತಿ ಪೋಷ ಶುಭತಮ–
ವಾದ ಧೃತ ನಿಜ ವೇಷ ಸಂತತ
ಮೋದಮಯ ಸತ್ಕಾಯ ನಿರ್ಜಿತ ದೋಷ ಗುಣಭೂಷಾ
ಪಾದ ಭಜಿಸಲು ಇಚ್ಛೆ ಪೂರ್ತಿಪ–
ನಾದಿ ಕಾಲದಲಿಂದ ಜನಕೀ
ಬೋಧಸುಖ ಮೊದಲಾದ ವಿಧವಿಧ ಪೂರ್ಣಫಲ ನೀಡ್ದ 25

ದಿತಿಜರೆಲ್ಲರು ನಿನ್ನ ಗೋವಿನ
ಸುತನಮಾಡೀ ಸರ್ವರಸಗಳ
ಮಿತಿಯೇಯಿಲ್ಲದೆ ಧರೆಯು ಗೋವಿನ ಮಾಡಿ ಕರೆಸಿದರು
ರತುನ ಹೇಮ ಸುಮೌಕ್ತಿಕಾವಳಿ
ತತಿಯ ಸಂತತಯೆಯ್ದಿ ಭೋಗದಿ
ವಿತತರಾದರು ನಿನ್ನ ಕರುಣವಯೆಂತು ವರ್ಣಿಸಲಿ 26

ನಿನ್ನ ನಂಬಿದ ಜನಕೆ ನ್ಯೂನತಿ
ಇನ್ನು ದಾವಿಧದಿಂದ ಬಾರದು
ಉನ್ನತಾಗೊದು ನಿಖಿಳ ಭಾಗ್ಯವು ಮಿತಿಯುಯಿಲ್ಲದಲೆ
ಘನ್ನ ನಿನ್ನಯ ಪಾದಯುಗಳವ
ಮನ್ನದಲೆ ನಾ ಭಜಿಪೆ ಸರ್ವದ
ಎನ್ನ ಪಾಲಿಸುಯೆಂದು ಪ್ರಾರ್ಥನೆ ಮಾಡಿ ಬೇಡುವೆನು 27

ಗೋವು ಪಂಕದಿ ಮಗ್ನವಾಗಿರೆ
ಕಾವ ನರನನು ಕಾಣದೀಪರಿ
ಧಾವಿ ಶ್ಯಾಗಲೆ ಬಪ್ಪ ನರನಿಗೆ ಉಸರಲದನವನು
ಭಾವಿ ಶಾಕ್ಷಣ ವ್ಯಸನ ಕಳೆಯದೆ
ತೀವಿ ಕೊಂಡದರಲ್ಲಿ ಮುಳುಗಿಸೆ
ಗೋವು ಮಾಡುವದೇನು ದೇವನೆ ನೀನೆ ಪಾಲಕನೂ 28

ಸ್ವಾತಿ ವೃಷ್ಟಿಗೆ ಬಾಯಿ ತೆರದಿಹ
ಚಾತಕಾಸ್ಯದೊಳಗ್ನಿಕಣ ಜೀ–
ಮೂತನಾಥನು ಗರೆಯಲಾಕ್ಷಣ ಆದರ ತಪ್ಪೇನೋ
ನೀತ ಗುರುವರ ನೀನೆ ಎನ್ನನು
ಪ್ರೀತಿಪೂರ್ವಕ ಪಾಲಿಸೆಂದೆಡೆ
ಮಾತು ಲಾಲಿಸದಿರಲು ಎನ್ನಯ ಯತನವೇನಿದಕೆ 29

ಜನನಿ ತನಯಗೆ ವಿಷವ ನೀಡಲು
ಜನಕ ತನಯರ ಮಾರಿಕೊಳ್ಳಲು
ಜನಪ ವೃತ್ತಿ–ಕ್ಷೇತ್ರ ಕಳೆದರೆ ಆರಿಗುಸರುವದೂ
ಘನ ಶಿರೋಮಣಿ ನೀನೆ ಎನ್ನನು
ಮನಕೆ ತಾರದೆ ದೂರ ನೋಡಲು
ಇನತೆ ಶ್ರಮವನು ಕಳೆದು ಪಾಲಿಪರಾರೊ ಪೇಳೆನಗೆ 30

ನಿನಗೆ ತಪ್ಪದು ಎನ್ನ ಕಾಯ್ವುದು
ಎನಗೆ ತಪ್ಪದು ನಿನ್ನ ಭಜಿಸೊದು
ಜನುಮ ಜನುಮಕೆ ಸಿದ್ಧವೆಂದಿಗು ಪುಸಿಯು ಮಾತಲ್ಲ
ಕನಸಿಲಾದರು ಅನ್ಯದೇವರ
ನೆನಿಸೆನೆಂದಿಗು ನಿನ್ನ ಪದಯುಗ
ವನಜವಲ್ಲದೆ ಪೆರತೆ ಎನಗೇನುಂಟೊ ಸರ್ವಜ್ಞ 31

ಭೀತಿಗೊಳಿಸುವ ಭವದ ತಾಪಕೆ
ಭೀತನಾದೆನೊ ಎನ್ನ ಪಾಲಿಸೊ
ಭೂತನಾಥನು ಭವದಿ ತೊಳಲುವ ಎನ್ನ ಪಾಡೇನು
ಭೂತದಯಪರನಾದ ಕಾರಣ
ಭೂತಿ ನೀ ಎನಗಿತ್ತು ಭವಭಯ
ಭೀತಿ ಪರಿಹರ ಮಾಡೊ ಗುರು ಜಗನ್ನಾಥ ವಿಠ್ಠಲನೆ 32

ಶ್ರೀ ರಾಘವೇಂದ್ರ ವಿಜಯದಲ್ಲಿ ಎರಡನೆಯ ಸಂಧಿಯು
ಸಮಾಪ್ತವಾಯಿತು.

# ಮೂರನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣಬಲದಲಿ
ರಾಘವೇಂದ್ರರ ಭಕುತರಾದವರಿದನ ಕೇಳುವದು

ಆನಮಿಪೆ ಗುರುರಾಯನಂಘ್ರಿಗೆ
ಸಾನುರಾಗದಿ ಸರ್ವಕಾಲಕೆ
ದೀನಜನರುದ್ಧಾರಿ ಜನರಘುಹಾರಿ ಶುಭಕಾರಿ
ನೀನೆಯೆನುತಲಿ ದೀನನಾಗೀ
ನಾನೆ ನಿನ್ನನು ಬೇಡಿಕೊಂಬೆನೊ
ನೀನೆ ಪಾಲಿಸು ಪ್ರಭುವೆ ಸ್ವಾಶ್ರಿತ ಜನರ ಸುರತರುವೆ 1

ಆ ಯುಗದಿ ಪ್ರಹ್ಲಾದನಾಮಕ
ರಾಯನೀ ಯುಗದಲ್ಲಿ ವ್ಯಾಸಾ-
ರಾಯನಾಗ್ಯವತರಿಸಿ ದಶಮತಿಮತವ ಸ್ಥಾಪಿಸಿದ
ತೋಯಜಾಂಬಕಲಕುಮಿಪತಿನಾ-
ರಾಯಣನೆ ತಾ ಸರ್ವರುತ್ತಮ
ತೋಯಜಾಸನದಿವಿಜರೆಲ್ಲರು ಹರಿಗೆ ಸೇವಕರೂ 2

ಇನಿತು ಶಾಸ್ತ್ರದ ಸಾರ ತೆಗೆದೂ
ವಿನಯದಿಂದಲಿ ತನ್ನ ಭಜಿಸುವ
ಜನರ ಸಂತತಿಗರುಹಿ ಮುಕುತಿಯ ಪಥವ ತೋರಿಸಿದ
ಮುನಿಕುಲೋತ್ತಮ ಯತಿಶಿರೋಮಣಿ
ಕನಕದಾಸನ ಪ್ರಿಯನು ಸಂಯಮಿ-
ಗಣಕೆ ರಾಜನು ಯದುವರೇಶನ ಭಜಿಸಿ ತಾ ಮೆರೆದ 3

ಈತ ಪುಟ್ಟಿದ ಚರ್ಯವರುಹುವೆ
ಭೂತಳದೊಳಾಶ್ಚರ್ಯವೆಂದಿಗು
ಭೂತ ಭಾವಿ ಪ್ರವರ್ತಕಾಲದಲಿಲ್ಲ ನರರೊಳಗೆ
ಜಾತನಾದರು ಜನವಿಲಕ್ಷಣ
ವೀತದೋಷ ವಿಶೇಷ ಮಹಿಮನು
ಖ್ಯಾತನಾದನು ಜಗದಿ ಸರ್ವದ ಜನನ ಮೊದಲಾಗಿ 4

ದಕ್ಷಿಣದಿ ಬನ್ನೂರು ಗ್ರಾಮದಿ
ದಕ್ಷನೆನಿಸಿದ ದೇಶಮುಖರಲಿ
ಲಕ್ಷ್ಮಿನಾಯಕನೆನಿಸಿ ಲೋಕದಿ ಖ್ಯಾತನಾಗಿಪ್ಪ
ಯಕ್ಷನಾಥನ ಧನದಿ ತಾನೂ
ಲಕ್ಷಿಕರಿಸನು ಯೆನಿಪನಾತಗೆ
ಲಕ್ಷಣಾಂಕಿತಳಾದ ಜಯವತಿಯೆಂಬ ಸತಿಯುಂಟು 5

ಜಲಜ ಜಯಿಸುವ ವದನ ನೈದಲಿ
ಗೆಲುವ ನಿರ್ಮಲ ನಯನಯುಗಳವು
ಲಲಿತ ಚಂಪಕನಾಸ ದರ್ಪಣಕದಪು ಶುಭಕರಣ
ಚಲುವದಾಡಿಯು ರದನ ಪಂಕ್ತಿಯು
ಕಲಿತರಕ್ತಾಧರದಿ ಮಿನುಗುತ
ಚಲಿಪಮಂದಸ್ಮಿತದಿ ಶೋಭಿಪ ಚುಬುಕ ರಾಜಿಪುದು 6

ಕಂಬು ಪೋಲುವ ಕಂಠದೇಶವು
ಕುಂಭಿ ಶುಂಡ ಸಮಾನ ಬಾಹೂ
ಅಂಬುಜೋಪಮ ಹಸ್ತಯುಗಳವು ಕಾಂಚನಾಭರಣ
ರಂಭೆಯುಳ ಕುಚಯುಗಳ ಸುಂದರ
ಕುಂಭ ಪೋಲ್ವವು ಉದರದೇಶವು
ರಂಭಪರಣ ಸುರೋಮರಾಜಿತ ಮೂರು ವಳಿಯೊಪ್ಪೆ 7

ಗುಂಭನಾಭಿಯು ಸುಳಿಯು ಸುರನದಿ
ಯಂಬುಸುಳಿಯಂದದಲಿ ನಾರಿ ನಿ–
ತಂಬಪುಲಿನವು ಕದಲಿಊರು ಜಾನುಕನ್ನಡಿಯು
ಶಂಬರಾರಿಯ ತೂಣ ಜಂಘೆಯು
ಅಂಬುಜೋಪಮಚರಣ ಪುತ್ಥಳಿ–
ಬೊಂಬೆಯಂದದಿ ಸಕಲಭೂಷಣದಿಂದಲೊಪ್ಪಿದಳು 8

ಶಿರಿಯೋ ಭಾಗ್ಯದಿ ಚಲ್ವಿನಿಂದ–
ಪ್ಸರೆಯೊ ರೂಪದಿ ರತಿಯೊ ಕ್ಷಮದಲಿ
ಧರೆಯೊ ದಯದಲಿ ನಿರುತ ವರಮುನಿಸತಿಯೊ ಪೇಳ್ವೆರ್ಗೆ
ಅರಿಯದಂತಾ ನಾರಿ ಶಿರೋಮಣಿ
ಪಿರಿಯ ಶಿರಿಗುಣರೂಪದಿಂದಲಿ
ಮೆರೆಯುತಿಪ್ಪಳು ರಾಜಸದನದಿ ಲಕುಮಿ ತೆರದಂತೆ 9

ದೇಶಪತಿಯತಿವೃದ್ಧನಾತಗೆ
ಕೂಸುಯಿಲ್ಲದೆ ಬಹಳ ಯೋಚಿಸೆ
ದೇಶತಿರುಗುತ ಬಂದನಾ ಬ್ರಹ್ಮಣ್ಯಮುನಿರಾಯ
ವಾಸಗೈಸಲು ತನ್ನ ಮನಿಯಲಿ
ಮಾಸನಾಲಕರಲ್ಲಿ ಯತಿವರ–
ಈಶ ಸೇವೆಯಮಾಡಿ ತಾನಾ ಮುನಿಯು ಬೆಸಗೊಂಡ 10

ಎನಗೆ ಸುತ ಸಂತಾನವಿಲ್ಲವೊ
ಜನುಮಸಾರ್ಥಕವಾಗೊ ಬಗೆಯೂ
ಎನಗೆ ತೋರದು ನೀವೆ ಯೋಚಿಸಿ ಸುತನ ನೀಡುವದು
ಎನಲು ನರವರ ವಚನಲಾಲಿಸಿ
ಮುನಿವರೋತ್ತಮ ನುಡಿದ ನರವರ!
ನಿನಗೆ ಸಂತತಿಯುಂಟು ಕೃಷ್ಣನ ಭಜಿಸು ಸತಿಸಹಿತ 11

ಎಂದು ಮುನಿವರ ಚಂದದಿಂದಲಿ
ಒಂದು ಫಲವಭಿ ಮಂತ್ರಿಸಿತ್ತೂ
ಮುಂದಿನೀದಿನಕೊಬ್ಬ ತನಯನು ನಿನಗೆ ಪುಟ್ಟುವನು
ತಂದು ನೀವಾಸುತನ ನಮಗೇ
ಪೊಂದಿಸುವದೂ ನಿಮಗೆ ಮತ್ತೂ
ಕಂದನಾಗುವ ನಿಜವು ವಚನವು ಕೇಳೊ ನರಪತಿಯೆ 12

ಯಾದವೇಶನ ಭಜನೆ ಗರ್ಹನು
ಆದ ಬಾಲಕ ಗರ್ಭದಿರುವನು
ಆದರಿಸಿ ಪರಿಪಾಲಿಸೂವದು ನಮ್ಮದಾಗಮನ
ವಾದನಂತರ ನಿನ್ನ ಸದನದಿ
ಹಾದಿ ನೋಡುತ ನಾಲ್ಕು ತಿಂಗಳು
ಸಾಧಿಸೂವೆವುಯೆಂದು ಯತಿವರ ನುಡಿದು ತಾ ನಡೆದ 13

ಪೋಗಲಾ ಯತಿನಾಥ ಮುಂದಕೆ
ಆಗಳಾತನ ಸತಿಯು ಗರ್ಭವ
ಜಾಗು ಮಾಡದೆ ಧರಿಸಿ ಮೆರೆದಳು ಆಯತಾಂಬಕೆಯು
ನಾಗರೀಯರ ಸತಿಯರೆಲ್ಲರು
ಆಗ ಸಂತಸದಿಂದ ನೆರೆದರು
ಬ್ಯಾಗ ರಾಜನ ರಾಣಿ ಗರ್ಭಿಣಿಯಾದುದಾಶ್ಚರ್ಯ 14

ಸಣ್ಣ ನಡು ತಾ ಬೆಳೆಯೆ ತ್ರಿವಳಿಯು
ಕಣ್ಣುಗಳಿಗೇ ಕಾಣದಾಗಲು
ನುಣ್ಣನೇ ಮೊಗವರಿಯೆ ಚೂಚುಕವೆರಡು ಕಪ್ಪಾಗೆ
ತಿಣ್ಣ ಪಚ್ಚಳ ಬೆಳೆಯೆ ಗಮನವು
ಸಣ್ಣದಾಗಲು ಬಿಳಿಪು ಒಡೆಯೇ
ಕಣ್ಣು ಪೂರ್ಬಿನ ಮಿಂಚು ಬೆಳೆಯಲು ಗರ್ಭಲಾಂಛನವು 15

ಬಿಳಿಯ ತಾವರೆಯೊಳಗೆಯಿರುತಿಹ
ಅಲಿಯು ಸಮುದಯವೇನೊ ಆಗಸ
ದೊಳಗೆ ದಿನದಿನ ಬೆಳೆಯೊ ಚಂದ್ರನ ಕಳೆಯೊಕನಕಾದ್ರಿ
ಯೊಳಗೆ ರಾಜಿಪ ಅಂಬುಧರತೆರ
ಪೊಳೆವ ಕಾಂತಿಯು ಚಲ್ವಿನಾನನ–
ದೊಳಗೆ ಮಿರುಗುವ ಗುರುಳುಗಳೊ ಸಲೆನಡುವಿನೋಳ್ಕಾನೆ 16

ಪೊಳೆವ ಗರ್ಭವಿದೇನೊ ಕುಚಯುಗ
ತೊಳಪು ಚೂಚುಕ ಕಪ್ಪಿನಿಂದಲಿ
ಪೊಳೆಯುತಿರ್ದಳು ಗರ್ಭಧಾರಣೆಮಾಡಿ ವನಜಾಕ್ಷಿ
ತಳಿರುಪೋಲುವ ಅಡಿಗಳಿಂದಲಿ
ಚಲುವಕದಳೀ ಊರುಯುಗದೀ
ಬಳಕಿ ಬಾಗುತ ನಡೆಯೊ ಲಲನೆಯ ನಡಿಗೆ ಶೋಭಿಪದು 17

ಚಂದ್ರಮುಖಿಯಳ ಜಠರವೆಂಬಾ
ಚಂದ್ರಕಾಂತದ ಮಣಿಯು ಮಧ್ಯದಿ
ಚಂದ್ರನಂದದಿ ಸಕಲಲೋಕಾನಂದಕರವಾದ
ಚಂದ್ರಬಿಂಬವ ಜೈಪ ಶಿಶು ತಾ
ಇಂದ್ರನಂದದಿ ಗರ್ಭದಿರಲೂ
ಸಾಂದ್ರತನುರುಚಿಯಿಂದಲೊಪ್ಪುತ ಮೆರೆದಳಾ ಜನನೀ 18

ಕಾಂಚನಾಂಗಿಯು ಗರ್ಭಧಾರಣ
ಲಾಂಛನೀ ಪರಿ ನೋಡಿ ನೃಪ ರೋ–
ಮಾಂಚನಾಂಚಿತ ಹರುಷದಿಂದಲಿ ಭೂಮಿ ದಿವಿಜರಿಗೆ
ವಾಂಛಿತಾರ್ಥವನಿತ್ತು ಮನದಲಿ
ಚಂಚಲಿಲ್ಲದೆ ನಾರಿಮಣಿಗೇ
ಪಂಚಮಾಸಕೆ ಕುಸುಮಮುಡಿಸೀ ಮಾಡ್ದ ಸೀಮಂತ 19

ನಾರಿಗಾಗಲು ಬಯಕೆ ಪರಿಪರಿ
ಆರುತಿಂಗಳು ಪೋಗುತಿರಲೂ
ದೂರ ದೇಶದಲಿಂದಲಾಗಲೆ ಬಂದ ಮುನಿರಾಯ
ವಾರಿಜಾಕ್ಷಿಯು ಯತಿಯ ಪಾದಕೆ
ಸಾರಿನಮನವಮಾಡೆ ಗುರುವರ
ಧೀರತನಯನ ಬ್ಯಾಗ ನೀ ಪಡಿಯೆಂದು ಹರಸಿದನು 20

ಬಾಲೆಬಸಿರೊಳಗಿಪ್ಪ ಶಿಶು ಗೋ–
ಪಾಲಪದಯುಗ ಭಕ್ತನವನಿಗೆ
ಪಾಲಕಾಗಿಹ ಹರಿಯ ಮಜ್ಜನಮಾಡಿ ನಿತ್ಯದಲಿ
ಪಾಲಿನಿಂದಲಿ ಗರ್ಭದಲೆ ತಾ
ಬಾಲಗೀಪರಿ ಜ್ಞಾನವಿತ್ತೂ
ಪಾಲಿಸೀ ಬ್ರಹ್ಮಣ್ಯತೀರ್ಥರು ನಿಂತರಾಗಲ್ಲೇ 21

ಬಳಿಕ ಬರಲಾಪ್ರಸವಕಾಲದಿ
ಪೊಳೆವ ವಿಸುಣೆಯ ಪಾತ್ರೆಯೊಳಗೇ
ತೊಳಪು ಸುಂದರ ಬೊಂಬೆಯಂದದಿ ಶಿಶುವು ಕಣ್ಗೊಪ್ಪೆ
ಕಳೆಗಳಿಂದಲಿ ನಭದಿ ದಿನದಿನ
ಬೆಳೆವ ಚಂದ್ರನೊ ಎನಿಪ ಬಾಲಕ
ಬೆಳಗುತೋರಿದ ಸೂತಿಕಾಗೃಹದೊಳಗೆ ತಾ ಜನಿಸೀ 22

ಅಂಬುಜಾಪ್ತನು ತಾನೆಂಬಿಳದೀ
ಕುಂಭಿಣೀಯಲಿ ಬಂದನೇನೋ
ತುಂಬಿಸೂಸುವ ತೇಜದಿಂದಲಿ ಬಾಲ ಶೋಭಿಸಿದ
ಸಂಭ್ರಮಾಯಿತು ಮುನಿಗೆ ಹರಿಪ್ರತಿ–
ಬಿಂಬನಾಗಿಹ ಬಾಲರೂಪವ–
ನಂಬಕದ್ವಯದಿಂದ ನೋಡೀ ಹರುಷಪುಲಕಾಂಕ 23

ಆಗ ಯತಿವರ ಬಂದು ಶಿಶುವಿನ
ಬೇಗ ತಾ ಸ್ವೀಕರಿಸಿ ನಡೆದನು
ಸಾಗರೋದ್ಭವ ಸುಧೆಯು ಕಲಶವ ಗರುಡನೊಯ್ದಂತೆ
ಜಾಗುಮಾಡದೆ ಮುನಿಪ ತಾನನು
ರಾಗದಿಂದಲಿ ಶಿಶುವಿನೀಪರಿ
ತೂಗಿ ಲಾಲಿಸಿ ಪಾಲುಬೆಣ್ಣೆಯು ತಾನೆ ನೀಡುತಲಿ 24

ಇಂದು ತೆರದಲಿ ಬಾಲ ಕಳೆಗಳ
ಹೊಂದಿ ದಿನದಿನ ವೃದ್ಧಿಯೆಯ್ದಿದ
ಕಂದರಂದದಿ ಹಟಗಳಿಲ್ಲವೊ ಮೂರ್ಖತನವಿಲ್ಲಾ
ಮಂದಮತಿ ತಾನಲ್ಲ ಬುಧವರ
ವೃಂದವಂದಿತ ಪಾದಪಂಕಜ
ದಿಂದ ಶೋಭಿತನಾಗಿ ಮಠದಲಿ ಪೊಂದಿಯಿರುತಿಪ್ಪ 25

ಮೊಳೆದ ಪಲ್ಗಳು ಬಾಯೊಳೊಪ್ಪಿರೆ
ತೊಳಪು ನಗೆಮುಖ ಸೊಬಗು ಸೂಸುವ
ಹೊಳೆವ ಕಂಗಳು ನುಣುಪುಫಣೆ ಮುಂಗುರುಳು ತಾ ಹೊಳೆಯೆ
ಸುಳಿಯನಾಭಿಯು ಉದರವಳಿತ್ರಯು
ಎಳೆಯ ಶಂಕರಿ ತೋಳು ಯುಗಳವು
ಜೋಲಿದಂಬೇಗಾಲು ನಡಿಗೆಯು ಸೊಗಸು ಶೋಭಿಪದೂ 26

ದೂಳಿಸೋಕಲು ಸುಂದರಾಂಗವು
ನೀಲ ಮೇಘದ ತೆರನೆ ತೋರ್ಪದು
ನೀಳಮಾರ್ಗದಿ ನಲಿದು ನಡೆವನು ಬೀಳುತೇಳುತಲಿ
ತಿಳಿಯುದತಿಸಂತೋಷವಾರಿಧಿ
ಯೊಳಗೆ ಸಂತತ ಮುನಿಪ ಮುಳುಗಿದ
ಪೇಳಲೆನವಶವಲ್ಲ ಬಾಲನ ಲೀಲೆ ಸುಖಮಾಲೆ 27

ಬಾಲ ಲೀಲೆಯು ನೋಡಿ ಹಿಗ್ಗುವ
ಲಾಲನೆಯು ತಾ ಮಾಡಿ ಪಾಡುವ
ಲೋಲಕುಂತಲ ಮುಖವ ಚುಂಬಿಪ ಗೋಪಿಯಂದದಲಿ
ಪಾಲಸಾಗರ ಶಯನ ಪದಯುಗ
ಲೋಲಬಾಲಕ ಎನಗೆ ದೊರೆತನು
ಪೇಳಲೇನಿಹದೆನ್ನ ಪುಣ್ಯದ ಫಲವೆ ಫಲಿಸಿಹುದೋ 28

ಆಡುತಿಹನೆಳೆ ಮಕ್ಕಳೊಡನೇ
ಮಾಡುತಿಹ ತಾನೊಮ್ಮೆ ಲೀಲೆಯು
ನೋಡುತಿಹ ಆಶ್ಚರ್ಯಗೊಳುತಲಿ ಬಾಲರಾಟವನೂ
ಕೂಡೆ ಮನಿಮನಿ ತಿರುಗುತಿಪ್ಪನು
ರೂಢಿಜನರನು ಮೋಹಗೊಳಿಸುವ
ಗಾಡಿಕಾರನು ಕೃಷ್ಣತೆರದಲಿ ಲೀಲೆಮಾಡಿದನು 29

ಪಾಡುವಂ ಜನರನ್ನು ಪರಿಪರಿ
ನೋಡುವಂ ಥರಥರದಿ ಹಾಸ್ಯವ
ಮಾಡುವಂ ತಾನರ್ಥಿಸುತಲವರೊಡನೆ ಇರುತಿಪ್ಪ
ಕ್ರೀಡಿಸುತಲಾಪುರದ ಬಾಲರ
ಕೂಡಿ ಈ ಪರಿ ಬೀದಿಯೊಳು ತಾ
ಮೂಢಬಾಲನ ತೆರದಿ ತೋರಿದ ಗೂಢಬಾಲಕನೂ 30

ಪಿಂತೆ ನಾರದಮುನಿಯು ವಚನವ
ಚಿಂತಿಸೀಪರಿ ತನ್ನ ಮನದಲಿ
ಕಂತುಜನಕನ ಸರ್ವಕಾಲದಿ ನೋಡಿ ನಲಿತಿಪ್ಪ
ಅಂತರಂಗದಿ ಶಿರಿಯ ರಮಣನ
ಇಂತು ಭಜನೆಯಗೈದು ಬಾಲಕ
ಅಂತುತಿಳಿಸದೆ ತಾನೆ ಪ್ರಾಕೃತರಂತೆಯಿರುತಿಪ್ಪ 31

ಪೋತಗಾಯಿತು ಪಂಚವತ್ಸರ
ನೀತವೇಸರಿ ಧೂಳಿಯಕ್ಷರ
ಪ್ರೀತಿಯಿಂದಲಿ ಬರೆದು ತೋರಲು ಬಾಲ ತಾ ನುಡಿದ
ತಾತ ಎನ್ನಯ ಮಾತು ಕೇಳೆಲೊ
ಧಾತನಾಂಡಕೆ ಮುಖ್ಯ ಗುರುಜಗ
ನ್ನಾಥ ವಿಠಲನು ತಾನೆ ಪೂರ್ಣನು ಸರ್ವರುತ್ತಮನು 32

ಶ್ರೀ ರಾಘವೇಂದ್ರವಿಜಯದಲ್ಲಿ ಮೂರನೆಯ ಸಂಧಿಯು
ಸಮಾಪ್ತವಾಯಿತು.

# ನಾಲ್ಕನೆಯ ಸಂಧಿ

ರಾಘವೇಂದ್ರರ ವಿಷಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕುತರಾದವರಿದನು ಕೇಳುವುದು

ಪರಮಕರುಣಾಕರನು ಲೋಕಕೆ
ಚರಣಸೇವಕರಾದ ಜನರಿಗೆ
ಸುರರತರುವರದಂತೆ ಕಾಮಿತ ನಿರುತ ಕೊಡುತಿಪ್ಪಿ
ಶರಣು ಪೊಕ್ಕೆನೊ ದುಃಖಮಯಭವ
ಅರಣದಾಟಿಸು ಶೀಘ್ರ ನಿನ್ನಯ
ಚರಣಯುಗದಲಿ ಎನ್ನನಿಟ್ಟು ಸಲಹೊ ಗುರುವರನೆ 1

ಇನಿತು ಬಾಲನ ವಾಕ್ಯಲಾಲಿಸಿ
ಮುನಿಕುಲೋತ್ತಮನಾದ ಯತಿವರ
ಮತಿಮತಾಂವರನಾದ ಬಾಲನ ನೋಡಿ ಸಂತಸದಿ
ಮನದಿ ಯೋಚಿಸಿ ಸಪ್ತವತ್ಸರ
ತನಯಗಾಗಲು ಮುಂಜಿ ಮಾಡಿಸಿ
ವಿನಯದಿಂದಾಶ್ರಮವ ಕೊಟ್ಟೊ ವ್ಯಾಸಮುನಿಯೆಂದ 2

ಮುಂದೆ ತಾ ಬ್ರಹ್ಮಣ್ಯಯತಿವರ
ಪೊಂದಿ ತಾ ಶ್ರೀಪಾದರಾಯರ
ಮುಂದೆ ಬಾಲನು ನಿಮ್ಮ ಸನ್ನಿಧಿಯಲ್ಲಿಯಿರಲೆಂದ
ಮಧ್ವಮತವುದ್ಧರಿಸಲೋಸುಗ
ಬಂದ ಬಾಲನ ತತ್ವತಿಳಿದೂ
ಛಂದದಲಿ ತಾ ವಿದ್ಯೆಪೇಳಿದ ವೇದ್ಯಮತಿಯತಿಗೆ 3

ಮೂಲಮೂವತ್ತೇಳುಗ್ರಂಥದ
ಜಾಲಟೀಕಾಟಿಪ್ಪಣೀಸಹ
ಪೇಳಿ ತಾ ಶ್ರೀಪಾದರಾಜರು ಧನ್ಯರೆನಿಸಿದರು
ಶೀಲಗುರುಬ್ರಹ್ಮಣ್ಯತೀರ್ಥರು
ಕಾಲದಲಿ ವೈಕುಂಠ ಲೋಕವ
ಶೀಲಮನದಲಿ ಹರಿಯು ಸ್ಮರಿಸುತ ತಾವೆ ಪೊಂದಿದರು 4

ಅಂದು ಗುರುಗಳ ಛಂದದಿಂದಲಿ
ಒಂದು ಬೃಂದಾವನದಿ ಪೂಜಿಸಿ
ಬಂದ ಭೂಸುರತತಿಗೆ ಭೋಜನ ಕನಕ ದಕ್ಷಿಣೆಯು
ಛಂದದಿಂದಲಿಯಿತ್ತು ದಿನದಿನ
ಇಂದಿರೇಶನ ಭಜಿಸುತಲಿ ತಾ–
ನಂದು ಗುರುಗಳ ಪ್ರೀತಿಪಡಿಸಿದ ವ್ಯಾಸಮುನಿರಾಯು 5

ಮುಳ್ಳಬಾಗಿಲ ಮಠದ ಮಧ್ಯದಿ
ಒಳ್ಳೆಮುತ್ತಿನ ಚಿತ್ರದಾಸನ–
ದಲ್ಲಿ ತಾ ಕುಳಿತಿರ್ದು ಶಿಷ್ಯರ ತತಿಗೆ ನಿತ್ಯದಲಿ
ಖುಲ್ಲಮಾಯ್ಗಳ ಮತವಿಚಾರವ
ಸುಳ್ಳುಮಾಡಿದ ಮಧ್ವಶಾಸ್ತ್ರಗ–
ಳೆಲ್ಲ ಬೋಧಿಸಿ ಹರಿಯೆ ಸರ್ವೋತ್ತಮನು ನಿಜವೆಂದ 6

ಏಕೋನಾರಾಯಣನೆ ಲಯದಲ–
ನೇಕ ಜೀವರ ತನ್ನ ಜಠರದಿ
ಏಕಭಾಗದಲಿಟ್ಟು ಲಕುಮಿಯು ಭುಜಗಳಾಂತರದಿ
ಶ್ರೀಕರನು ತಾ ಶೂನ್ಯನಾಮದಿ
ಏಕರೂಪವ ಪೊಂದುಗೊಳಿಸುತ
ಶ್ರೀಕರಾತ್ಮಕವಟದ ಪತ್ರದಿ ಯೋಗನಿದ್ರಿಯನು 7

ಮಾಡುತಿರಲಾಕಾಲಕಂಭ್ರಣಿ
ಪಾಡಿ ಜಯಜಯವೆಂದು ಸ್ತವನವ
ಮಾಡಿ ಬೋಧಿಸಿ ಸೃಷ್ಟಿಕಾಲವು ಪ್ರಾಪ್ತವಾಗಿಹದೊ
ನೋಡಿ ಜೀವರ ಉದರದಿರುವರ
ಮಾಡಿ ಭಾಗವ ಮೂರುವಮುಷ್ಟಿಯು
ಒಡೆಯ ತಾನೇ ಸೃಷ್ಟಿಮಾಡಿದ ಸೃಜ್ಯಜೀವರನ 8

ಆದಿನಾರಾಯಣನೆ ಮೂಲನು
ವೇದಗಮ್ಯಾನಂತನಾಮಕ
ಆದನಾತನು ಅಂಶಿರೂಪನು ವಿಶ್ವತೋಮುಖನು
ಪಾದಹಸ್ತಾದ್ಯವಯವಂಗಳು
ವೇದರಾಶಿಗೆ ನಿಲುಕಲಾರವು
ವೇದಮಾನಿಯು ಲಕುಮಿ ತಿಳಿಯಳು ತಿಳಿವ ಸರ್ವಜ್ಞ 9

ವಿಶ್ವತೋಮುಖ ಚಕ್ಷು ಕರ್ಣನು
ವಿಶ್ವತೋದರ ನಾಭಿ ಕುಕ್ಷನು
ವಿಶ್ವತೋಕಟಿ ಊರು ಜಾನೂ ಜಂಘೆಯುಗ ಗುಲ್ಫ
ವಿಶ್ವತೋಮಯ ಪಾದವಾರಿಜ
ವಿಶ್ವತಾಂಗುಲಿ ರಾಜಿನಖಗಳು
ವಿಶ್ವಕಾಯನು ವಿಶ್ವದೊಳಗಿಹ ವಿಶ್ವ ವಿಶ್ವೇಶ 10

ಅಪದಪಾಣಿಯು ಜವನಪಿಡಿವನು
ಉಪಿತಶ್ರುತಿ ಕಣ್ಕೇಳಿನೋಡ್ವನು
ಅಪರಮಹಿಮನ ಶಿರಿಯು ಅರಿಯಳು ಸುರರ ಪಾಡೇನು
ಜಪಿಸಿ ಕಾಣುವೆನೆಂದು ಲಕುಮಿಯು
ಅಪರಿಮಿತ ತಾ ರೂಪಧರಿಸೀ
ತಪಿಸಿ ಗುಣಗಳ ರಾಶಿಯೊಳು ತಾನೊಂದು ತಿಳಿಲಿಲ್ಲ 11

ಅಂದುಪೋಗಿಹ ಲಕುಮಿರೂಪಗ–
ಳಿಂದಿಗೂ ಬರಲಿಲ್ಲ ಕಾರಣ–
ಛಂದದಿಂದಲಿ ವೇದಪೇಳ್ವದನಂತ ಮಹಿಮೆಂದು
ಒಂದೆರೂಪದಿ ಹಲವುರೂಪವು
ಒಂದೆಗುಣದೊಳನಂತಗುಣಗಳು
ಎಂದಿಗಾದರು ಪೊಂದಿಯಿಪ್ಪವನಂತಕಾಲದಲಿ 12

ಪೂರ್ಣವೆನಿಪವು ಗುಣಗಣಂಗಳು
ಪೂರ್ಣವೆನಿಪವು ಅವಯವಂಗಳು
ಪೂರ್ಣವೆನಿಪವು ರೂಪಕರ್ಮಗಳಾವಕಾಲದಲಿ
ಪೂರ್ಣನಗುಮುಖ ಕಂಠಹೃದಯನು
ಪೂರ್ಣಜಾನು ಸುಕಕ್ಷ ಕುಕ್ಷನು
ಪೂರ್ಣಕಟಿ ತಟ ನಾಭಿ ಊರು ಜಾನು ಜಂಘೆಗಳು 13

ಪೂರ್ಣಗುಲ್ಫ ಸುಪಾದಪದುಮವು
ಪೂರ್ಣವಾದಂಗುಲಿಯ ಸಂಘವು
ಪೂರ್ಣ–ನಖ–ಧ್ವಜ–ವಜ್ರ–ಚಕ್ರ–ಸುಶಂಖ ರೇಖೆಗಳು
ಪೂರ್ಣವಾದುದು ಅಂಶಿರೂಪವು
ಪೂರ್ಣವಾದುದು ಅಂಶರೂಪವು
ಪೂರ್ಣವಾಗಿಹವೆಲ್ಲ ಜೀವರ ಬಿಂಬರೂಪಗಳು 14

ಪುರುಷ ಸ್ತ್ರೀಯಳುಯೆಂಬ ಭೇದದಿ
ಎರಡುರೂಪಗಳುಂಟು ಈತಗೆ
ಪುರುಷನಾಮಕ ನಂದಮಯ ಬಲಭಾಗ ತಾನೆನಿಪ
ಕರಸುವನು ವಿಜ್ಞಾನಮಯ ತಾ–
ನರಸಿಯೆನಿಸುತ ವಾಮಭಾಗದಿ
ಇರುವ ಕಾರಣ ಸ್ವರಮಣನು ತಾನಾಗಿಯಿರುತಿಪ್ಪ 15

ನಾರಅಯಣನು ಪುರುಷರೂಪದಿ
ನಾರಅಯಣಿಯು ಸ್ತ್ರೀಯ ರೂಪದಿ
ಬೇರೆಯಲ್ಲವು ತಾನೆ ಈವಿಧ ಎರಡುರೂಪದಲಿ
ತೋರುತಿಪ್ಪನು ಸ್ತ್ರೀಯ ರೂಪವೆ
ಚಾರುತರ ಸಿರಿವತ್ಸನಾಮದಿ
ಸೇರಿಯಿಪ್ಪದು ಪುರುಷರೂಪದಿ ವಕ್ಷೊವುಂದಿರದಿ 16

ಲಕುಮಿದೇವಿಗೆ ಬಿಂಬವೆನಿಪೊದು
ಸಕಲ ಸ್ತ್ರೀಯರ ಗಣದಲಿಪ್ಪದು
ವ್ಯಕುತವಾಗಿಹುದಾದಿಕಾಲದಿ ಮುಕುತಿ ಸೇರಿದರು
ವಿಕಲವಾಗದು ಯೆಂದಿಗಾದರು
ನಿಖಿಳಜಗದಲಿ ವ್ಯಾಪಿಸಿಪ್ಪದು
ಲಕುಮಿರಮಣಿಯ ಲಕ್ಷ್ಯವಿಲ್ಲದೆ ಸೃಜಿಪ ತಾನೆಲ್ಲ 17

ಪುರುಷಜೀವರ ಹೃದಯದಲಿ ತಾ
ಪುರುಷರೂಪದಿ ಬಿಂಬನೆನಿಸುವ
ಇರುವ ಸರ್ವದ ಪ್ರಳಯದಲಿಸಹ ಬಿಡನು ತ್ರಿವಿಧರನು
ಕರಸುತಿಪ್ಪನು ಜೀವನಾಮದಿ
ಬೆರೆತು ಕರ್ಮವಮಾಡಿ ಮಾಡಿಸಿ
ನಿರುತಜೀವರ ಕರ್ಮರಾಶಿಗೆ ಗುರಿಯಮಾಡುವನು 18

ಮೂಲನಾರಾಯಣನು ತಾ ಬಲು
ಲೀಲೆಮಾಡುವ ನೆವದಿ ತಾನೆ ವಿ–
ಶಾಲಗುಣಗಣ–ಸಾಂಶ–ಜ್ಞಾನಾನಂದ–ಶುಭಕಾಯನು
ಬಾಲರೂಪವ ಧರಿಸಿ ವಟದೆಲೆ
ಆಲಯದಿ ಶಿರಿ–ಭೂಮಿ–ದುರ್ಗೆರ
ಲೋಲನಾದಾಪದುಮನಾಭನೆ ವ್ಯಕುತ ತಾನಾದ 19

ನಾನವಿಧದವತಾರಗಳಿಗೆ ನಿ–
ದಾನ ಬೀಜವುಯೆನಿಸುತಿಪ್ಪೊದು
ಮೀನ–ಕೂರ್ಮ–ವರಾಹ ಮೊದಲೂ ಸ್ವಾಂಶಕಳೆರೂಪ
ತಾನೆ ಸಕಲಕೆ ಮೂಲಕಾರಣ
ತಾನೆ ತನ್ನಯು ರೂಪ ಸಮುದಯು
ತಾನೆ ತನ್ನಲಿಯಿಡುವ ಪ್ರಲಯದಲೇಕನೆನಿಸುವನು 20

ರಾಮರೂಪವನಂತಯಿಪ್ಪದು
ವಾಮನಾದಿಯನಂತ ಕೃಷ್ಣರು
ಸೀಮವಿಲ್ಲದೆ ರೂಪಸಂತತಿ ಬೇರೆ ತೋರುವದು
ಹೇಮನಿರ್ಮಿತ ಮೂರ್ತಿಗೊಪ್ಪುವ
ಚಾಮಿಕರಮಯಚಾರುಭೂಷಣ–
ಸ್ತೋಮ ನೋಡುವ ಜನರ ಸಂಘಕೆ ಬೇರೆತೋರ್ಪಂತೆ 21

ಅಂಶಿಯಲಿ ಸಂಶ್ಲೇಷಐಕ್ಯವು
ಅಂಶ ಸಮುಹವು ಎಯ್ದು ತೋರ್ಪುದು
ಸಂಶಯೇನಿದರಲ್ಲಿ ತೆನೆಯೊಳು ಕಾಳ್ಗಳಿದ್ದಂತೆ
ಭ್ರಂಶರಾಗದೆ ಸುಮತಗಳನು ಪ್ರ–
ಸಂಶಮಾಳ್ಪ ಸುಶಾಸ್ತ್ರದಲಿ ನಿ–
ಸ್ಸಂಶಯಾತ್ಮಕರಾಗಿ ಮನದೃಢ ಮಾಡಿ ನೋಡುವದು 22

ಬಿಂಬಹರಿ ಪ್ರತಿಬಿಂಬಜೀವರು
ಬಿಂಬನೇ ತಾ ಮೂಲ ಕಾರಣ
ಇಂಬುಯೆನಿಪ ಸ್ವರೂಪದೇಹೋಪಾಧಿಯೆನಿಸುವದು
ಎಂಬ ವಾಕ್ಯದ ಭಾವ ತಿಳಿಯದೆ
ಶುಂಭರಾದರು ದ್ವಿಜರು ಕೆಲವರು
ಗುಂಭವಾಗಿದರರ್ಥಯಿರುವದು ಪರಮಗೋಪಿತವು 23

ಸತ್ಯವಾಗಿಹ ಆತ್ಮರೂಪವೆ
ನಿತ್ಯವಾದ ಉಪಾಧಿಯೆನಿಪದು
ವ್ಯತ್ಯಯುವುಯೇನಿಲ್ಲ ನೋಡಲು ಗೊತ್ತು ತಿಳಿಯದಲೆ
ವ್ಯತ್ಯಯಾರ್ಥವಮಾಡಿ ಕೆಡಿಸದೆ
ಸತ್ಯವಾದದು ತಿಳಿಯಲಾ ಹರಿ
ಭೃತ್ಯರಾಗ್ರಣಿಯಾಗಿ ಪರಸುಖವೆಯ್ದಿ ಮೋದಿಪನು 24

ಅಂತರಾತ್ಮನು ಸಕಲಜೀವರ
ಅಂತರಂಗಸ್ವರೂಪ ದೇಹದಿ
ನಿಂತು ತಾ ಸರ್ವಾಂಗವ್ಯಾಪಕನಾಗಿಯಿರುತಿಪ್ಪ
ಸಂತತದಿ ತಾ ನಂದರೂಪನ-
ನಂತ ಜೀವಸ್ವರೂಪಬಹಿರದಿ
ನಿಂತು ಸದ್ವಿಜ್ಞಾನರೂಪದಿ ಆತ್ಮನೆನಿಸಿಪ್ಪ 25

ಈತನಂತಾನಂತರೂಪದಿ
ಪ್ರೀತಿಪೂರ್ವಕ ದಾಸಜನರಿಗೆ
ನೀತಫಲಗಳ ಸರ್ವವ್ಯಾಪಕ ತಾನೆ ಕೊಡುತಿಹನು
ಜಾತ ಸೂರ್ಯಾನಂತನಿಭ ನಿಜ-
ಜ್ಯೋತಿಮಯ ಸತ್ತೇಜೋಪುೂರುತಿ
ದಾತಗುರುಜಗನ್ನಾಥವಿಠಲನು ತಾನೆ ಪರಿಪೂರ್ಣ 26

ಶ್ರೀ ರಾಘವೇಂದ್ರವಿಜಯದಲ್ಲಿ ನಾಲ್ಕನೆಯ ಸಂಧಿಯು
ಸಮಾಪ್ತವಾಯಿತು.

## ಐದನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕುತರಾದವರಿದನು ಕೇಳುವುದು

ಬೇಧ ಪಂಚಕ ತಾರತಮ್ಯವ–
ನಾದಿಕಾಲದಿ ಸಿದ್ಧವೆನ್ನುವ
ಮೋದತೀರ್ಥರ ಶಾಸ್ತ್ರಮರ್ಮವ ಪೇಳ್ದ ಬುಧಜನಕೆ
ಬೇಧ ಜೀವನಿಯೆಂಬ ಗ್ರಂಥವ
ಸಾದರದಿ ತಾ ರಚಿಸಿ ಲೋಕದಿ
ವಾದದಲಿ ಪ್ರತಿವಾದಿ ಸಂಘವ ಜೈಸಿ ರಾಜಿಸಿದ 1

ತರ್ಕತಾಂಡವ ರಚನೆಮಾಡಿ ವಿ–
ತರ್ಕವಾದಿಯ ಮುರಿದು ಪರಗತಿ
ಕರ್ಕಶಾಗಿಹ ನ್ಯಾಯವೆನಿಪಾಮೃತವ ನಿರ್ಮಿಸಿದ
ಶರ್ಕರಾಕ್ಷಗೆ ಗಹನ ಚಂದ್ರಿಕೆ–
ಯರ್ಕನಂದದಿ ತಿಮಿರಹರ ದೇ।
ವರ್ಕರಲ್ಲದೆ ಕೃತಿಗೆ ಯೋಗ್ಯರು ನರರು ಆಗುವರೆ 2

ದಶಮತೀಕೃತಶಾಸ್ತ್ರಭಾವವ
ವಿಶದ ಮಾಡುವ ಟಿಪ್ಪಣೀಗಳ
ಮಸೆದ ಅಸಿತೆರಮಾಡಿ ಪರಮತ ನಾಶಗೈಯುತಲಿ
ಅಸಮ ಮಹಿಮೆಯ ತೋರಿ ತಾ ಈ
ವಸುಧಿ ಮಂಡಲ ಮಧ್ಯ ಪೂರ್ಣಿಮ
ಶಶಿಯ ತೆರದಲಿ ಪೂರ್ಣಕಳೆಯುತನಾಗಿ ಶೋಭಿಸಿದ 3

ತಂತ್ರಸಾರದಿ ಪೇಳ್ದ ಸುಮಹಾ
ಮಂತ್ರ ಸಂಘವ ಶಿಷ್ಯ ಜನಕೇ
ಮಂತ್ರಮರ್ಮವ ತಿಳಿಸಿ ಸಿದ್ಧಿಯಮಾಡಿ ತೋರಿಸುತ
ಅಂತವಿಲ್ಲದ ವಿಶ್ವಕೋಶದ
ತಂತ್ರಮಾಡುವ ಸರ್ವಲೋಕಸ್ವ–
ತಂತ್ರ ಶ್ರೀಹರಿಪಾದಪಂಕಜ ಭಜನೆ ಪರನಾದ 4

ಪದಸುಳಾದಿಗಳಿಂದ ಹರಿಗುಣ
ಮುದದಿ ಪೇಳುತ ಮುದ್ರಿಕಿಲ್ಲದೆ
ಹೃದಯದಲಿ ತಾ ಚಿಂತೆಗೈತಿರಲಾಗ ಮುನಿರಾಯಾ
ಒದಗಿ ಪೇಳಿದ ಕೃಷ್ಣಸ್ವಪ್ನದಿ
ಬದಲುಯಾವದು ನಿನಗೆಯಿಲ್ಲವೊ
ಯದುವರಶ್ರೀ ಕೃಷ್ಣನಾಮವ ನಿನಗೆ ಮುದ್ರಿಕೆಯೋ 5

ಒಂದು ದಿನದಲಿ ವಿಪ್ರನೋರ್ವನು
ಬಂದು ವ್ಯಾಸರ್ಪಾದಕಮಲಕೆ
ವಂದಿಸೀ ಕೈಮುಗಿದು ಬೇಡಿದ ಎನಗೆ ಉಪದೇಶ
ಇಂದು ಮಾಡಿರಿ ಎನಗೆ ಪರಗತಿ
ಪೊಂದೊ ಮಾರ್ಗವ ತೋರಿ ಸಲಹಿರಿ
ಮಂದಮತಿ ನಾನಯ್ಯ ಗುರುವರ ಕರುಣಸಾಗರನೆ 6

ಕ್ಷೋಣಿತಳದಲಿ ತನ್ನ ಮಹಿಮೆಯ
ಕಾಣಗೊಳಿಸುವೆನೆಂದು ಚಾರಗೆ
ಕೋಣನೆಂಬುವ ನಾಮಮಂತ್ರವ ಪೇಳಿ ಕಳುಹಿದನು
ಮಾಣದಲೆ ತಾನಿತ್ಯ ಜಲಧರ
ಕೋಣ ಕೋಣವುಯೆಂದು ಜಪಿಸಿದ
ವಾಣಿ ಸಿದ್ಧಿಯಯೆಯ್ದು ಕಾಲನ ಕೋಣ ಕಂಗೊಳಿಸೆ 7

ಕೆತ್ತಕತ್ತಲುಮೊತ್ತವೋ ಬಲ–
ಮತ್ತರಾಂ ಜನರಾಶಿಯೋ ನಗ–
ಕುತ್ತುಮೋತ್ತಮನೀಲಪರ್ವತವೇನೊ ಪೇಳ್ವರ್ಗೆ
ಚಿತ್ತತೋಚದ ತೆರದಿ ಕಾಲನ
ಮತ್ತವಾಗಿಹ ಕೋಣ ಶೀಘ್ರದಿ
ಅತ್ತಲಿಂದಲಿ ಬಂದು ದೂತನ ಮುಂದೆ ಕಣ್ಗೆಸೆಯೆ 8

ದಂಡಧರನಾ ಕೋಣ ಕಣ್ಣಲಿ
ಕಂಡು ಪಾರ್ವನು ಮನದಿ ಭೀತಿಯ
ಗೊಂಡು ಗಡಗಡ ನಡುಗುತೀಪರಿ ಶ್ರಮವನೆಯ್ದಿದನು
ಚಂಡಕೋಪವ ತಾಳಿ ಮಹಿಷವು
ಪುಂಡ ಎನ್ನನು ಕರೆದ ಕಾರಣ
ಖಂಡಿತೀಗಲೆ ಪೇಳೊ ನಿನಮನೊಬಯಕೆ ಪೂರ್ತಿಸುವೆ 9

ದ್ವಿಜಲುಲಾಯದ ವಚನಲಾಲಿಸಿ
ತ್ಯಜಿಸಿ ತಪವನು ತ್ವರದಿ ಬಂದೂ
ನಿಜಗುರೂತ್ತಮರಾದ ವ್ಯಾಸರ ನಮಿಸಿ ತಾ ನುಡಿದ
ದ್ವಿಜನೆ ಪೇಳಿಲೊ ಮಹಿಷಪತಿಗೇ
ದ್ವಿಜವರೂಥನ ಪಾದಪಂಕಜ
ಭಜನೆಗನುಕೂಲವಾದ ಕಾರ್ಯವಮಾಡು ನೀಯೆಂದೂ 10

ಕೆರೆಯು ಒಳಗಿಹದೊಂದು ಉರುಶಿಲೆ
ನರರಿಗಸದಳವೆನಿಸುತಿರ್ಪುದು
ಕರೆದು ಕೋಣಕೆ ಪೇಳಿ ಶಿಲೆಯನು ತಗಿಸು ತ್ವರದಿಂದ
ಗುರುಗಳಾಡಿದ ವಚನ ಶಿರದಲಿ
ಭರಿಸಿ ದ್ವಿಜತಾ ಬಂದು ಕೋಣಕೆ
ಅರಿಕೆಮಾಡಿದ ಗುರುಗುಳೋಕ್ತಿಯ ನೀನೆಮಾಡೆಂದಾ 11

ಪೇಳಿದಾದ್ವಿಜವರನ ವಚನವ
ಕೇಳಿದಾಕ್ಷಣ ಶಿಲೆಯು ತಾನೂ
ಸೀಳಿಬಿಸುಟಿತು ಸುಲಭದಿಂದಲಿ ಏನು ಅಚ್ಚರವೋ
ಕೇಳು ದ್ವಿಜವರ ಮತ್ತೆ ಕಾರ್ಯವ
ಪೇಳು ಮಾಡುವೆ ನೀನೆ ಕರೆಯಲು
ವ್ಯಾಳ್ಯದಲಿ ನಾ ಬಂದುಮಾಡುವೆನೆಂದು ತಾ ನುಡಿದು 12

ನಡಿಯಲಾ ಯಮರಾಯ ಕೋಣವು
ಬಡವದ್ವಿಜನಿಗೆ ಮುಸಿಯು ಒಲಿದೂ
ಮಡದಿ–ಮಕ್ಕಳು–ವೃತ್ತಿ–ಕ್ಷೇತ್ರವು–ಕನಕ–ಮನಿಧನವು
ದೃಢ–ಸುಭಕುತಿ–ಜ್ಞಾನವಿತ್ತೂ
ಪೊಡವಿತಳದಲಿ ಪೊರೆದು ಹರಿಪದ–
ಜಡಜಯುಗದಲಿ ಮನವನಿತ್ತೂ ಗತಿಯ ಪಾಲಿಸಿದಾ 13

ಏನು ಮಹಿಮೆಯೊ ವ್ಯಾಸರಾಯರ
ಏನು ಪುಣ್ಯದ ಪ್ರಭವೊ ಲೋಕದಿ
ಏನು ಪೂಜ್ಯನೊ ಆವದೇವ ಸ್ವಭಾವಸಂಭವನೊ
ಏನು ಪೂರ್ವದ ತಪದ ಫಲವೋ
ಏನು ಹರಿಪದ ಪೂಜ ಫಲವೋ
ಏನು ದೈವವೋ ಇವರ ಕರುಣದಿ ಜಗಕೆ ಅಖಿಳಾರ್ಥ 14

ಇಂದ್ರತಾ ನೈಶ್ವರ್ಯದಿಂದಲಿ
ಚಂದ್ರ ತಾ ಕಳೆಪೂರ್ತಿಯಿಂದ ದಿ–
ನೇಂದ್ರ ತಾ ನಿರ್ದೋಷತನದಲಿ ಮೆರೆವ ನೀ ತೆರದಿ
ಮಂದ್ರಗಿರಿಧರ ಹರಿಯಕರಣವು
ಸಾಂದ್ರವಾದುದರಿಂದ ತಾನೆ ಯ–
ತೀಂದ್ರಮಹಿಮಯಗಾಧವಾಗಿಹುದೆಂದು ಜನಹೊಗಳೆ 15

ವ್ಯಾಸಸಾಗರವೆಂಬ ವಿಮಲ ಜ-
ಲಾಶಯವ ತಾಮಾಡಿ ದಿನದಿನ
ಕೀಶನಾಥನ ಸೇವೆಮಾಡುತ ದೇಶದಲಿ ಮೆರೆವಾ
ಶೇಷಗಿರಿಯನು ಸಾರ್ದು ವೇಂಕಟ
ಈಶ ಮೂರ್ತಿಯ ಪೂಜಿ ಸಂತತ
ಆಶೆಯಿಲ್ಲದೆಗೈದು ದ್ವಾದಶವರುಷ ಬಿಡದಂತೆ 16

ಇಳಿದು ಗಿರಿಯನು ಧರಣಿತಳದಲಿ
ಮಲವು ಮೂತ್ರವುಮಾಡಿ ಮತ್ತೂ
ಜಲದಿಸ್ನಾನವಗೈದು ಪಾಠವ ಪೇಳಿ ಹರಿಪೂಜಾ
ಇಳೆಯ ಸುರವರಸಂಘಮಧ್ಯದಿ
ಬೆಳಗುತಿಪ್ಪನು ವ್ಯಾಸಮುನಿಯೂ
ಕಳೆಗಳಿಂದಲಿ ಪೂರ್ಣಚಂದಿರ ನಭದಿ ತೋರ್ಪಂತೆ 17

ತಿರುಪತೀಶನ ಕರುಣಪಡದೀ
ಧರೆಯಮಂಡಲ ಸುತ್ತುತಾಗಲೆ
ಧುರದಿ ಮೆರೆವಾ ಕೃಷ್ಣರಾಯನ ಸಲಹಿ ಮುದವಿತ್ತ
ಧರೆಗೆ ದಕ್ಷಿಣಕಾಶಿಯೆನಿಸುವ
ಪರಮಪಾವನ ಪಂಪಕ್ಷೇತ್ರಕೆ
ಸುರವರೇಶನ ದಿಗ್ವಿಭಾಗದಲಿರುವ ಗಿರಿತಟದಿ 18

ಮೆರೆವ ಚಕ್ರಸುತೀರ್ಥತೀರದಿ
ಇರುವ ರಘುಕುಲರಾಮದೇವನು
ಪರಮಸುಂದರ ಸೂರ್ಯಮಂಡಲವರ್ತಿಯೆನಿಸಿಪ್ಪ
ತರುಣನಾರಾಯಣನ ಮೂರುತಿ
ಗಿರಿಯೊಳಿಪ್ಪನು ರಂಗನಾಥನು
ವರಹದೇವನು ಪೂರ್ವಭಾಗದಿಯಿರುವನಾಸ್ಥಳದಿ 19

ಹರಿಯುಯಿಲ್ಲದ ಸ್ಥಳದಲಿರುತಿಹ
ಹರಿಯು ಪೂಜೆಗೆ ಅರ್ಹನಲ್ಲವೊ
ಹರಿಯ ಸ್ಥಾಪನ ಮುಖ್ಯಮಾಳ್ಪದುಯೆನುತ ಯತಿನಾಥ
ಗಿರಿಯ ಮಧ್ಯದಿ ಮರುತರೂಪವ–
ನಿರಿಸಿ ಪೂಜೆಯಮಾಡಿ ಪರಿಪರಿ
ಸುರಸ–ಪಕ್ವ–ಸುಭಕ್ಷ್ಯಭೋಜನ–ಕನಕ–ದಕ್ಷಿಣವಾ 20

ಧರಣಿಸುರಗಣಕಿತ್ತು ಗುರುವರ
ಸ್ಮರಣೆಮಾಡುತ ನಿದ್ರೆಮಾಡಲು
ಬರುತ ಮರುದಿನ ನೋಡೆ ಕಪಿವರಮೂರ್ತಿ ಕಾಣದಲೆ
ಭರದಿ ಅಚ್ಚರಿಗೊಂಡು ಸಂಯಮಿ–
ವರನು ಮನದಲಿ ಯೋಚಿಸೀಪರಿ
ಮರಳಿ ಪ್ರಾಣನ ಸ್ಥಾಪಿಸೀತೆರ ಯಂತ್ರಬಂಧಿಸಿದ 21

ಕೋಣಷಟ್ಕದ ಮಧ್ಯಮುಖ್ಯ–
ಪ್ರಾಣದೇವನ ನಿಲಿಸಿ ವಲಯದಿ
ಮಾಣದಲೆ ಕಪಿಕಟಕಬಂಧಿಸಿ ಬೀಜವರಣಗಳ
ಜಾಣತನದಲಿ ಬರೆದು ತ್ರಿಜಗ–
ತ್ರಾಣನಲ್ಲೇ ನಿಲಿಸಿ ಪೂಜಿಸಿ
ಕ್ಷೋಣಿತಳದಲಿ ಕರೆದ ಯಂತ್ರೋದ್ಧಾರ ನಾಮದಲಿ 22

ದಿನದಿ ಚಕ್ರಸುತೀರ್ಥಸ್ನಾನವ
ಇನನಉದಯದಿಮಾಡಿ ಆಹ್ನಿಕ
ಮನದಿ ಬಿಂಬನ ಪೂಜೆಗೋಸುಗ ಪಿರಿಯ ಗುಂಡೇರಿ
ಪ್ರಣವ ಪೂರ್ವಕ ಆಸನೋಪರಿ
ಮನಸು ಪೂರ್ವಕ ಕುಳಿತು ಹರಿಪದ–
ವನಜ ಭಜಿಸುತ ದಿನದಿ ಸಾಧನ ಘನವು ಮಾಡಿದನು 23

ಈ ತೆರದಿ ಶಿರಿವ್ಯಾಸಮುನಿಯೂ
ವಾತದೇವನ ಭಜಿಸುತಿರಲಾ
ಭೂತಕಾಲದಲಿಂದ ಚಕ್ರಸುತೀರ್ಥದೊಳಗಿಪ್ಪ
ನೀತಸಿರಿಗುರು ಮಧ್ವರಾಯನ
ಈತ ಮೇಲಕೆ ತಂದು ಪೂಜಿಸಿ
ದಾತ ಗುರುಜಗನ್ನಾಥವಿಠಲನ ಪ್ರೀತಿಗೊಳಗಾದ 24

ಶ್ರೀ ರಾಘವೇಂದ್ರವಿಜಯದಲ್ಲಿ ಐದನೆಯ ಸಂಧಿ
ಸಮಾಪ್ತವಾಯಿತು.

## ಆರನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣಬಲದಲಿ
ರಾಘವೇಂದ್ರರ ಭಕುತರಾದವರಿದನು ಕೇಳುವದು

ನತಿಪಜನತತಿಗಮರಪಾದಪ
ನುತಿಪಜನಸುರಧೇನು ಕಾಮಿತ
ಸತತನೀಡುತ ಧರಣಿಸುರವರನಿಕರಪರಿಪಾಲ
ಪ್ರತಿಯುಕಾಣೆನೊ ಪ್ರತಿಗಳರಸನೆ
ನತಿಪೆ ತವಪದ ಕಮಲಯುಗ್ಮಕೆ
ತುತಿಪೆ ಎನ್ನನು ಪೊರೆಯೊ ಗುರುವರ ಪತಿತಪಾವನನೆ 1

ಆವ ಪಂಪಾಕ್ಷೇತ್ರದಲಿ ಹರಿ
ಶೇವಕಾಗ್ರಣಿ ವ್ಯಾಸಮುನಿಯೂ
ಕಾಮನಯ್ಯನ ಸತತ ಭಜಿಸುತ ವಾಸಮಾಡಿರಲು
ದೇವವರ್ಯರೆ ಒಂದುರೂಪದಿ
ತಾವೆಭೂತಳದಲ್ಲಿ ಜನಿಸುತ
ಕೋವಿದಾಗ್ರೇಸರರುಯೆನಿಸೀ ಮೆರದರಾ ಸ್ಥಳದಿ 2

ನಾರದರೆ ತಾ ಶ್ರೀಪುರಂದರ
ಸೂರಿತನಯನೆ ಕನಕ ತಾ ಜಂ–
ಭಾರಿಯೇ ವೈಕುಂಠದಾಸರು ವ್ಯಾಸ ಪ್ರಹ್ಲಾದ
ಈರು ಎರಡೀ ಜನರು ಸರ್ವದ
ಮಾರನಯ್ಯನ ಪ್ರೇಮಪಾತ್ರರು
ಸೇರಿಯಿರುವದರಿಂದೆ ಪಂಪಾ ನಾಕಕಿನ್ನಧಿಕ 3

ವ್ಯಾಸರಾಯರ ಮಠದ ಮಧ್ಯದಿ
ವಾಸಮಾಡಲು ಸಕಲದ್ವಿಜರೂ
ದಾಸರಾಗಿಪ ಸರ್ವರಿಂದಲಿ ಸಭೆಯು ಶೋಭಿಸಿತು
ವಾಸವನ ಶುಭಸಭೆಯೊ ಪೇಕ್ಷ್ಕಮು-
ಲಾಸನನ ಸಿರಿವೈಜಯಂತಿಯೊ
ಭಾಷಿಸುವರಿಗೆ ತೋರದಂದದಿ ಸಭೆಯು ತಾನೊಪ್ಪೆ 4

ಪಂಪಕ್ಷೇತ್ರವು ದಾಸವರ್ಯರ
ಗುಂಪಿನಿಂದ ಸಮೇತವಾಗೀ
ಶಂಭಲಾಪುರದಂತೆ ತೋರ್ಪದು ಸುಜನಮಂಡಲಕೆ
ತಂಪುತುಂಗಾನದಿಯವನ ತಾ
ಸೊಂಪಿನಿಂದಲಿ ಸರ್ವಜನಮನ
ಕಿಂಪುಗಾಣಿಸಿ ಸರ್ವಸಂಪದದಿಂದ ಶೋಭಿಪದು 5

ಒಂದುದಿನದಲಿ ವ್ಯಾಸಮುನಿಯು ಪು-
ರಂದರಾರ್ಯರು ಒಂದುಗೂಡೀ
ಬಂದುಸೇರ್ದರು ಸುಖವನುಣಲೂ ವಿಜಯವಿಠಲನ್ನ
ಮಂದಿರಕೆ ಬಲಸಾರೆಯಿರುತಿಹ-
ದೊಂದು ಸುಂದರಪುಲಿನಮಧ್ಯದಿ
ಅಂದು ಹರಿಯಪರೋಕ್ಷವಾರಿಧಿಯೊಳಗೆ ಮುಳುಗಿದರು 6

ಬಂದನಲ್ಲಿಗೆ ಕುರಬನೊಬ್ಬನು
ತಂದ ಕುರಿಗಳ ಬಿಟ್ಟುದೂರದಿ
ನಿಂದು ನೋಡಿದ ಇವರ ಚರಿಯವ ಕನಕನಿಲ್ಲದಲೆ
ಮಂದಹಾಸವು ಕೆಲವುಕಾಲದಿ
ಮಂದರಾಗೊರು ಕೆಲವುಕಾಲದಿ
ಪೊಂದಿಯಿಬ್ಬರು ಅಪ್ಪಿಕೊಂಡೂ ಮುದದಿ ರೋದಿಪರೋ 7

ಬಿದ್ದು ಪುಲಿನದಿ ಪೊರಳಿ ಹೊರಳೊರು
ಎದ್ದು ಕುಣಿಕುಣಿದಾಡಿ ಚೀರೊರು
ಮುದ್ದು ಕೃಷ್ಣನ ತೋರಿತೋರುತ ತಾವು ಪಾಡುವರೋ
ಶಿದ್ಧಸಾಧನ ಕನಕ ಸಮಯಕೆ
ಇದ್ದರಿಲ್ಲೀ ಲಾಭವಾಗೊದು
ಇದ್ದಸ್ಥಾನಕೆ ಪೋಗಿ ಆತನ ಕರಿಪೊರಾರಿಲ್ಲಾ 8

ಸುದ್ದಿ ಕೇಳುತ ನಿಂತ ಕುರುಬನು
ಎದ್ದು ಕನಕನ ಕರೆದು ತೋರುವೆ
ಇದ್ದ ಸ್ಥಳವನು ಪೇಳಿರೆಂದಾ ಮುನಿಗೆ ಬೆಸಗೊಂಡಾ
ಎದ್ದು ನಡದಾನದಿಯ ತೀರದ–
ಲಿದ್ದ ಕನಕನ ಬೇಗ ಕರದೂ
ತಂದು ತೋರುತ ವ್ಯಾಸಮುನಿಗೇ ಬಿದ್ದು ಬೇಡಿದನು 9

ದಾರಿ ಮಧ್ಯದಿ ತನಗೆ ಕನಕನು
ತೋರಿ ಪೇಳಿದ ತೆರದಿ ಕುರುಬನು
ಸಾರೆಗರೆದೂ ಬೇಡಿಕೊಂಡನು ಲಾಭ ಕೊಡಿರೆಂದು
ಧೀರಮುನಿವರ ದಾಸವರರೆ ವಿ–
ಚಾರಮಾಡಿರಿ ಏನು ನೀಡಲಿ
ತೋರವಲ್ಲದು ಪರಿಯು ನೀವೇ ಪೇಳಿರೆಮಗೆಂದ 10

ಕನಕ ಪೇಳಿದ ಕೊಟ್ಟವಚನವು
ಮನದಿ ಯೋಚಿಸಿ ಕೊಡುವದವಗೇ
ಅನುಜನಾತನು ನಿಮಗೆ ತಿಳಿವದು ಚಿಂತೆಯಾಕದಕೆ
ಎನಲು ಮುನಿವರ ಮನದಿ ತಿಳಿದೂ
ಜನಿತವಾದಾನಂದಲಾಭವ
ಮನಸುಪೂರ್ವಕಯಿತ್ತು ಕರುಣವ ಮಾಡಿ ತಾಪೊರೆದ 11

ಜ್ಞಾನಿಗಳು ತಾವಂಗಿಕರಿಸಲು
ಹೀನಕೆಲಸಗಳಾದ ಕಾಲಕು
ಏನು ಶ್ರಮವದರಿಂದ ಬಂದರು ಬಿಡದೆ ಪಾಲಿಪರು
ಸಾನುರಾಗದಿ ಸಕಲಜನರಭಿ–
ಮಾನಪೂರ್ವಕ ಪೊರೆದು ಭಕ್ತಿ–
ಜ್ಞಾನವಿತ್ತೂ ಹರಿಯ ಲೋಕದಿ ಸುಖವ ಬಡಿಸುವರು 12

ತೀರ್ಥಸ್ನಾನವಮಾಡಿ ತಾವಾ
ತೀರ್ಥಶುದ್ಧಿಯ ಮಾಡೊರಲ್ಲದೆ
ತೀರ್ಥಸ್ನಾನಗಳಿಂದಲವರಿಗೆ ಏನುಫಲವಿಲ್ಲಾ
ಪಾರ್ಥಸಾರಥಿಪಾದ ಮನದಲಿ
ಸ್ವಾರ್ಥವಿಲ್ಲದೆ ಭಜನೆಗೈದು ಕೃ–
ತಾರ್ಥರಾಗೀ ಜಗದಿ ಚರಿಪರು ಸತತ ನಿರ್ಭಯದಿ 13

ಬುಧರ ದರುಶನದಿಂದ ಪಾತಕ
ಸದದು ಭಾಷಣದಿಂದ ಮುಕುತಿಯು
ಪದದ ದಾರಿಯ ತೋರಿ ಕೊಡುವರು ಸದಸದೂಳಗಿರಲು
ಒದಗಿಸುವರೂ ಭಾಗ್ಯ ಜನರಿಗೆ
ಮದವು ಏರಿದ ಗಜದ ತೆರದಲಿ
ಪದುಮನಾಭನ ದಾಸರವರಿಗಸಾಧ್ಯವೇನಿಹದೋ 14

ಯತಿಕುಲೋತ್ತಮವ್ಯಾಸರಾಯರ
ಮಿತಿಯುಯಿಲ್ಲದ ಮಹಿಮೆಯಿಂದಲಿ
ಪತಿತಪಾಮರರೆಲ್ಲರು ಧೃತರಾದುದೇನರಿದು
ಸತತಬಿಂಬೋಪಾಸನೊಚ್ಛ್ರಿತ
ವಿತತಜ್ಞಾನದ ವಿಭವದಿಂದಲಿ
ಪ್ರತಿಯುಯಿಲ್ಲದೆ ತಾನು ರಾಜಿಪ ಸೂರ್ಯನಂದದಲಿ 15

ಮೋದತೀರ್ಥರ ಶಾಸ್ತ್ರಜಲಧಿಗೆ
ಮೋದದಾಯಕಸೋಮನೋ [illegible]ರ–
ವಾದಿವಾರಿಜಹಂಸ ಚಂದಿರ ಸ್ವಮತಸತ್ಕುಮುದ–
ಕಾದ ತಾ ನಿಜ ಸುಜನ ಕೈರವ
ಬೋಧಕರ ತಾ ಚಂದ್ರಮಂಡಲ
ಪಾದಸೇವಕರೆನಿಪ ಸುಜನ ಚಕೋರ ಚಂದ್ರಮನೋ 16

ಹರಿಯರೂಪ ಸಮಾದಿಯೋಗದಿ
ನಿರುತಕಾಣುತಲಿಪ್ಪ ಗುರುವರ
ಹೊರಗೆ ಕಾಣುವನೆಂಬ ಕಾರಣ ಕನಕಗಿನಿತೆಂದಾ
ಚರನ ತೆರದಲಿ ನಿನ್ನ ಸಂಗಡ
ತಿರುಗುತಿಪ್ಪನು ಸರ್ವಕಾಲದಿ
ಸಿರಿಯರಮಣನ ಎನಗೆ ತೋರಿಸು ಮರಿಯಬೇಡೆಂದಾ 17

ಅಂದ ಮುನಿವರವಚನ ಮನಸಿಗೆ
ತಂದು ಕನಕನು ಹರಿಗೆ ಪೇಳಿದ
ಒಂದುಕಾಲದಿ ಮುನಿಗೆ ದರುಶನ ನೀಡು ಜಗದೀಶಾ
ಇಂದಿರಾಪತಿ ಕೇಳಿ ವಚನವ
ಮಂದಹಾಸವಮಾಡಿ ನುಡಿದನು
ಬಂದು ಶ್ವಾಸಸ್ವರೂಪದಿಂದಲಿ ಮುನಿಗೆ ತೋಥುವೆನು 18

ದೇವತಾರ್ಚನೆಮಾಡಿ[illegible]ಗುರುವರ
ಸಾವಧಾನದಿ ಭಕ್ಷ್ಯ–ಭೋಜ್ಯವ
ಕಾಮನಯ್ಯಗೆ ನೀಡೊಕಾಲದಿ ಶ್ವಾನ ಬರಲಾಗ
ಕೋವಿದಾಗ್ರಣಿ ವ್ಯಾಸಮುನಿಯು
ಭಾವಿಶ್ಯಾಗಲೆ ಹರಿಯ ಮಹಿಮೆಯು
ದೇವದೇವನೆ ಈ ವಿಧಾನದಿ ತೋರ್ದ ತನಗೆಂದೂ 19

ದೃಷ್ಟಿಯಿಂದಲಿ ಕಂಡು ಮುನಿವರ
ಥಟ್ಟನೆದುಕುಲತಿಲಕಕೃಷ್ಣನ
ಬಿಟ್ಟು ತಾ ಜಡಮೂರ್ತಿ ಪೂಜೆಯ ಶುನಕದರ್ಚನೆಯಾ
ಮುಟ್ಟಿ ಭಜಿಸಿದ ಭಕುತಿಯಿಂದಲಿ
ಕೊಟ್ಟ ತಾನ್ನೈವೇದ್ಯ ತ್ವರದಲಿ
ತಟ್ಟಿಮಂಗಳದಾರ್ತಿಮಾಡಿ ಶಿರದಿ ನಮಿಸಿದನು 20

ಅಲ್ಲಿ ದ್ವಿಜವರರಿದನು ನೋಡೀ
ಎಲ್ಲಿಯಿಲ್ಲದ ಚರಿಯ ಯತಿವರ–
ರಲ್ಲಿ ನಡೆಯಿತುಯಿನ್ನುಮುಂದೇ ಮಡಿಯು ಮೈಲಿಗೆಯು
ಇಲ್ಲದಾಯಿತು ನಾಯಿಪೂಜೆಯು
ಎಲ್ಲ ಜನರಿಗೆ ಮತವು ಎನಿಪದು
ಖುಲ್ಲಕನಕನ ಮಾತಿಗೀಯತಿ ಮರಳುಗೊಂಡಿಹನು 21

ಈ ತೆರದಿ ತಾವೆಲ್ಲ ವಿಬುಧರು
ಮಾತನಾಡಿದರೆಂಬೊ ವಾರ್ತೆಯ
ದೂತಪರಿಮುಖದಿಂದ ಕೇಳೀ ವ್ಯಾಸಮುನಿರಾಯ
ನೀತವಾದಪರೋಕ್ಷದಿಂದಲಿ
ಜಾತಜ್ಞಾನದಿ ಹರಿಯ ರೂಪವ
ಸೋತ್ತುಮಾದ್ವಿಜರೊಳಗೆ ಓರ್ವಗೆ ತೋರಿ ಮೋದಿಸಿದ 22

ಸರ್ವಜನರಿಗೆ ಸಮ್ಮತಾಯಿತು
ಗುರುವರೇಣ್ಯನ ಮಹಿಮೆ ಪೊಗಳುತ
ಊರ್ವಿತಳದಲಿ ಖ್ಯಾತಿಮಾಡ್ದರು ಸರ್ವಸಜ್ಜನರು
ಶರ್ವನಾಲಯದಲ್ಲಿ ಸೂರ್ಯನ
ಪರ್ವಕಾಲದಿ ವಿಪ್ರಪುತ್ರನ
ದರ್ವಿಸರ್ಪವು ಕಚ್ಚಲಾಕ್ಷಣ ಮೃತಿಯನೆಯ್ದಿದನು 23

ಮೃತಿಯನೆಯ್ದಿದ ವಿಪ್ರಪುತ್ರನ
ಮೃತಿಯ ತಾ ಪರಿಹರಿಸಿ ಶೀಘ್ರದಿ
ಪಿತಗೆ ನೀಡಿದ ಸರ್ವಜನರೂ ನೋಡುತಿರಲಾಗಾ
ವ್ರತಿವರೋತ್ತಮಮಹಿಮೆ ಜಗದೊಳ-
ಗತುಳವೆನುತಲಿ ಮುನಿಯ ಗುಣಗಳ
ತುತಿಸಿ ಪೊಗಳುತ ಪಾದಕಮಲಕೆ ನಮನಮಾಡಿದರು 24

ವಿದ್ಯರಣ್ಯನ ವಾದದಲಿ ತಾ
ಗೆದ್ದ ಶ್ರೀ ಜೈತೀರ್ಥವಿರಚಿತ
ಶುದ್ಧ ಶ್ರೀಮನ್ಯಾಯಸತ್ಸುಧನಾಮಸತ್ಕೃತಿಗೆ
ಎದ್ದು ತೋರುವ ಚಂದ್ರಿಕಾಭಿಧ
ಮುದ್ದು ಟಿಪ್ಪಣಿಸಹಿತ ಪಾಠವ
ಮಧ್ವರಾಯರ ಬಳಿಯೆ ಪೇಳುತಲಿದ್ದನಾಸ್ಥಳದಿ 25

ಮತ್ತೆ ಪಂಪಾಕ್ಷೇತ್ರದಲಿ ತಾ-
ನಿತ್ಯನಿತ್ಯದಿ ಹರಿಯ ಭಜಿಸುತ
ಸತ್ಯಸಂಕಲ್ಪಾನುಸಾರದಿ ಕೃತ್ಯ ತಾಮಾಡಿ
ಉತ್ತಮೋತ್ತಮವೆನಿಪ ಸ್ಥಾನವು
ಹತ್ತಲಿಹ ಗಜಗಹ್ವರಾಭಿಧ
ಎತ್ತನೋಡಲು ತುಂಗನದಿಯುಂಟದರ ಮಧ್ಯದಲಿ 26

ಛಂದಯಿಪ್ಪದು ನೋಡಿ ಮುನಿವರ
ಬಂದು ತುಂಗಾನದಿಯ ಜಲದಲಿ
ಮಿಂದು ಪುಂಡ್ರವಧರಿಸಿ ಜಪತಪನೇಮಕರ್ಮಗಳಾ
ಒಂದುಬಿಡದಲೆಮಾಡಿ ಹೃದಯದಿ
ಇಂದಿರೇಶನ ಪೂಜೆಗೈದೂ
ಪೊಂದಿಶ್ಯಾತನ ಪದದಿ ಮನವನು ಸಾರ್ದವೈಕುಂಠ 27

ಇಂದಿಗಿರುತಿಹವಲ್ಲಿ ಶುಭನವ
ಛಂದ ಬೃಂದಾವನಗಳೊಳಗೇ
ಸುಂದರಾತ್ಮಕವಾದ ವೃಂದಾವನದಿ ಮುನಿರಾಯಾ
ಪೊಂದಿಯಿಪ್ಪನು ಸತತ ತನ್ನನು
ವಂದಿಸೀಪರಿ ಭಜಿಪ ಜನರಿಗೆ
ಕುಂದದಲೆ ಸರ್ವಾರ್ಥ ಕೊಡುತಲಿಯಿಪ್ಪ ನಮ್ಮಪ್ಪ 28

ವ್ಯಾಸರಾಯರ ಮಹಿಮೆ ದಿನದಿನ
ಬ್ಯಾಸರಿಲ್ಲದೆ ಪಠಿಪ ಜನರಿಗೆ
ಕ್ಲೇಶ–ದೇಹಾಯಾಸ–ಘನತರ ದೋಷ–ಸಮನಿಸವು
ವಾಸುದೇವನ ಕರುಣವವನಲಿ
ಸೂಸಿತುಳಕೊದು ಸಂಶಯಾತಕೆ
ಕೀಶಗುರುಜಗನ್ನಾಥ ವಿಠಲನು ಪ್ರೀತನಾಗುವನು 29

ಶ್ರೀ ರಾಘವೇಂದ್ರ ವಿಜಯದಲ್ಲಿ ಆರನೆಯ ಸಂಧಿಯು
ಸಮಾಪ್ತವಾಯಿತು.

## ಏಳನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕುತರಾದವರಿದನು ಕೇಳುವದು

ಜಯ ಜಯತು ಗುರುರಾಯ ಶುಭಕರ
ಜಯ ಜಯತು ಕವಿಗೇಯ ಸುಂದರ
ಜಯ ಜಯತು ಘನ ಬೋಧ ಗುಣಗಣಪೂರ್ಣ ಗಂಭೀರ
ಜಯ ಜಯತು ಭಕ್ತಾಲಿಪಾಲಕ
ಜಯ ಜಯತು ಭಕ್ತೇಷ್ಟದಾಯಕ
ಜಯ ಜಯತು ಗುರುರಾಘವೇಂದ್ರನೆ ಪಾಹಿ ಮಾಂ ಸತತ 1

ಆದಿಯಲಿ ಪ್ರಹ್ಲಾದ ನಾಮಕ-
ನಾದ ತ್ರೇತಾಯುಗದಿ ಲಕ್ಷ್ಮಣ-
ನಾದ ದ್ವಾಪರಯುಗದಿ ಬಲ ಬಾಹ್ಲೀಕನಾಮದಲಿ
ಯಾದವೇಶನ ಭಜಿಸಿ ಕಲಿಯುಗ
ಪಾದದೊಳು ತಾ ಎರಡು ಜನ್ಮವ
ಸಾದರದಿ ತಾ ಧರಿಸಿ ಮೆರೆದನು ದೇವಗುರುರಾಯ 2

ಸಾರ ಸುಂದರಕಾಯ ಸುಗಣೋ-
ದಾರ ಶುಭತಮ ಸ್ವೀಯ ಮಹಿಮಾ-
ಪಾರಕವಿನುತ ಖ್ಯಾತ ನಿರ್ಜಿತದೋಷ ಪರಿತೋಷ
ಧಾರುಣೀಸುರ ಕುಮುದಚಂದಿರ
ಘೋರಪಾತಕ ತಿಮಿರದಿನಕರ
ಧೀರಮಧ್ವಮತಾಬ್ಧಿಭಾಸ್ಕರನೆನಿಸಿ ರಾಜಿಪನು 3

ಸೂರಿಜನಹೃದಯಾಬ್ಜಮಂದಿರ
ಹೀರ–ಹಾರ–ವಿಭೂಷಿತಾಂಗನು
ಚಾರು–ರತ್ನ–ಕಿರೀಟಕುಂಡಲ–ರತ್ನಮಾಲೆಗಳ
ವಾರಿಜಾಕ್ಷೀ ಮಣಿಯು ತುಲಸೀ
ಸಾರಮಾಲೆಯ ಧರಿಸಿ ಯತಿವರ
ತೋರುತಿಪ್ಪನು ಬಾಲಸೂರ್ಯನ ತೆರದಿ ಲೋಕದಲಿ 4

ಚಾರುತರ ಕೌಪೀನ ಪಾದುಕ–
ಧಾರಿ ದಂಡ ಕಮಂಡು ಲಾಂಚಿತ
ಸಾರ ದ್ವಾದಶ ಪುಂಡ್ರ ಮುದ್ರೆಗಳಿಂದ ಚಿಹ್ನಿತನು
ಸಾರಿದವರಘ ತರಿದು ಸುಖಫಲ
ಸೂರಿ ಕೊಡುತಲಿ ಸರ್ವಕಾಲದಿ
ಧಾರುಣೀ ತಳದಲ್ಲಿ ಈಪರಿ ಮೆರೆದ ಗುರುರಾಯ 5

ಮತಿಮತಾಂವರ ರಾಘವೇಂದ್ರನು
ಮಿತಿಯುಯಿಲ್ಲದೆ ಮಹಿಮೆ ಜನರಿಗೆ
ಸತತ ತೋರುತ ಪೊರೆಯುತಿರುವನು ಸಕಲ ಸಜ್ಜನರ
ಸತಿಸುತಾದಿ ಸುಭಾಗ್ಯ ಸಂಪದ
ಮತಿಯು ಜ್ಞಾನ ಸುಭಕ್ತಿ ದಿನದಿನ
ವಿತತವಾಗಿತ್ತಖಿಲ ಜನರನು ಪ್ರೀತಿಗೊಳಿಸುತಲಿ 6

ಸುರರ ನದಿಯಂದದಲಿ ಪಾಪವ
ತರಿವ ನರ್ಕನ ತೆರದಿ ಕತ್ತಲೆ
ಶರಧಿತನಯನ ತೆರದಿ ತಾಪವ ಕಳೆದು ಸುಖವೀವ
ಸರಿಯುಗಾಣೆನು ಇವರ ಚರ್ಯಕೆ
ಹರಿಯು ತಾನೇ ಸಿರಿಯ ಸಹಿತದಿ
ಇರುವ ತಾನಾನಂದ ಮುನಿವರ ಸಕಲಸುರಸಹಿತ 7

ಇನಿತೆ ಮೊದಲಾದಮಿತ ಗುಣಗಣ–
ವನಧಿಯೆನಿಸುತಲವನಿತಳದಲಿ
ಅನುಪಮೋಪಮ ತಾನೆ ತನ್ನನು ನಂಬಿ ಭಜಿಪರಿಗೆ
ಕನಸಿಲಾದರು ಶ್ರಮವ ತೋರದೆ
ಮನದ ಬಯಕೆಯ ಸಲಿಸಿ ಕಾಯುವ
ತನುಸುಛಾಯದ ತೆರದಿ ತಿರುಗುವ ತನ್ನ ಜನರೊಡನೆ 8

ಏನು ಕರುಣೆಯೊ ಏನು ದಾತನೊ
ಏನು ಮಹಿಮೆಯೊ ಏನು ಶಕುತಿಯೊ
ಏನು ಇವರಲಿ ಹರಿಯ ಕರುಣವೊ ಏನು ತಪಬಲವೋ
ಏನು ಕೀರ್ತಿಯೊ ಜಗದಿ ಮೆರೆವದು
ಏನು ಪುಣ್ಯದ ಫಲವೊ ಇವರನ
ಏನು ವರ್ಣಿಪೆ ಇವರ ಚರಿಯವನಾವ ಬಲ್ಲವನು 9

ಧರಣಿ ತಳದಲಿ ಮೆರೆವ ಗುರುವರ
ಚರಿಯ ತಿಳಿಯಲು ಸುರರೆ ಯೋಗ್ಯರು
ಅರಿಯರೆಂದಿಗು ನರರು ದುರುಳರು ಪರಮಮೋಹಿತರೂ
ಮರುಳುಮಯ ಭವದಾಶ ಪಾಶದ
ಉರುಳು ಗಣ್ಣಿಗೆ ಶಿಲ್ಕಿ ಹಗಲೂ
ಇರುಳುಯನದಲಿ ಏಕವಾಗೀ ತೊಳಲಿ ಬಳಲುವರು 10

ಕರುಣವಾರಿಧಿ ಶರಣಪಾಲಕ
ತರುಣದಿನಕರನೆನಿಪ ಗುರುವರ
ಚರಣ ಸೇವಕಜನರಪಾಲಿಪ ಜನನಿ ತೆರದಂತೆ
ಸುರರತರುವರದಂತೆ ಸಂತತ
ಪೊರೆದು ತನ್ನಯ ಭಕುತ ಜನರನು
ಧರಣಿಮಂಡಲದೊಳಗೆ ರಾಜಿಪ ನತಿಪಜನಭೂಪಾ 11

ಏನು ಚೋದ್ಯವೊ ಕಲಿಯ ಯುಗದಲಿ
ಏನು ಈತನ ಪುಣ್ಯ ಬಲವೋ
ಏನು ಈತನ ವಶದಿ ಶ್ರೀಹರಿ ತಾನೆ ನಿಂತಿಹನೋ
ಏನು ಕರುಣಾನಿಧಿಯೊ ಈತನು
ಏನು ಭಕುತರಿಗಭಯದಾಯಕ
ಏನು ಈತನ ಮಹಿಮೆ ಲೋಕಕಗಮ್ಯವೆನಿಸಿಹದೋ 12

ವಿಧಿಯು ಬರದಿಹ ಲಿಪಿಯು ಕಾರ್ಯವ
ಬದಲುಮಾಡುವ ಶಕುತಿ ನಿನಗೇ
ಪದುಮನಾಭನು ದಯದಿ ತಾನೇಯಿತ್ತ ಕಾರಣದಿ
ಸದಯ ನಿನ್ನಯ ಪಾದಪದುಮವ
ಹೃದಯ ಮಧ್ಯದಿ ಭಜಿಪ ಶಕುತಿಯ.
ಒದಗಿಸೂವದುಯೆಂದು ನಿನ್ನನು ನಮಿಸಿ ಬೇಡುವೆನು 13

ಘಟನವಾಗದ ಕಾರ್ಯಗಳ ನೀ
ಘಟನಮಾಡುವ ವಿಷಯದಲಿ ನೀ
ಧಿಟನುಯೆನುತಲಿ ಬೇಡಿಕೊಂಬೆನೊ ಕರುಣವಾರಿಧಿಯೇ
ಶಠದಿ ನಿನ್ನನು ಭಜಿಸದಿಪ್ಪರ
ಶಠವ ಕಳೆದತಿಹಿತದಿ ನಿನ್ನಯ
ಭಟರ ಕೋಟಿಗೆ ಘಟನಮಾಡುವದೇನು ಅಚ್ಚರವೋ 14

ನಿನ್ನ ಕರುಣಕೆ ಎಣೆಯಗಾಣೆನೊ
ನಿನ್ನ ಶಕುತಿಗೆ ನಮನಮಾಡುವೆ
ನಿನ್ನ ಕರುಣಕಟಾಕ್ಷದಿಂದಲಿ ನೋಡೊ ಗುರುರಾಯ
ನಿನ್ನ ಪದಯುಗದಲ್ಲಿ ಸರ್ವದ
ಎನ್ನ ಮನವನು ನಿಲಿಸಿ ಪಾಲಿಸೊ
ನಿನ್ನ ಜನ್ಯನು ನಾನು ಎನ್ನಯ ಜನಕ ನೀನಲ್ಲೆ 15

ಹಿಂದೆ ಮಾಡಿದ ನಿನ್ನ ಮಹಿಮೆಗ-
ಳೊಂದು ತಿಳಿಯದು ಪೇಳೊ ಶಕುತಿಯು
ಎಂದಿಗಾದರು ಪುಟ್ಟಲಾರದು ಮನುಜರಾಧಮಗೇ
ಇಂದು ಮಹಿಮವ ತೋರಿ ಭಕುತರ
ವೃಂದ ಮೋದದಿ ಪಾಡಿಕುಣವದು
ನಂದಸಾಗರಮಗ್ನವಾದುದ ನೋಡಿ ಸುಖಿಸುವೆನು 16

ವ್ಯಾಸಮುನಿ ಗುರುವರ್ಯ ಎನ್ನಯ
ಕ್ಲೇಶ ನಾಶನಮಾಡಿ ಕರುಣದಿ
ವಾಸುದೇವನ ಹೃದಯಸದನದಿ ತೋರಿ ಪೊರೆಯೆಂದೇ
ವಾಸವಾಸರದಲ್ಲಿ ತವ ಪದ
ಆಶೆಯಿಂದಲಿ ಸೇವಿಮಾಳ್ಪೆನು
ದಾಸನೆನಿಸೀ ಭವದ ಶ್ರಮಪರಿಹರಿಸೊ ಗುಳುರಾಯ 17

ತತ್ತ್ವಸಾರವ ತಿಳಿಸು ಭವದಿ ವಿ-
ರಕ್ತ ಮತಿಯನುಯಿತ್ತು ತ್ವತ್ಪದ
ಸಕ್ತಚಿತ್ತನಮಾಡಿ ಭಗವದ್‌ಭಕ್ತನೆಂದೆನಿಸು
ಕೆತ್ತವೋಲ್ ಮನ್ಮನದಿಯಿರುತಿಹ
ಕತ್ತಲೆಯು ಪರಿಹರಿಸಿ ದಿನದಿನ
ಉತ್ತಮೋತ್ತಮ ಜ್ಞಾನಭಕುತಿಯಿನಿತ್ತು ಪೊರಯೆನ್ನ 18

ಪ್ರಣತಜನಮಂದಾರ ಕಾಮದ
ಕ್ಷಣ ಕ್ಷಣಕ್ಕೆ ನಿನ್ನ ಗುಣಗಳ
ಗಣನಪೂರ್ವಕ ಮನದಿ ಸಂತತ ಭಜನೆಗೈವಂತೆ
ಮಣಿಸು ಮನವನು ನಿನ್ನ ಪದದಲಿ
ಗುಣಿಸಿ ನಿನ್ನಯ ರೂಪ ನೋಡೀ
ದಣಿಸು ನಿನ್ನವರೊಳಗೆ ಸಂತತ ಎಣಿಸೊ ಕರುಣಾಳೋ 19

ನಿನ್ನ ಕಥೆಗಳ ಶ್ರವಣಮಾಡಿಸೊ
ನಿನ್ನ ಗುಣಕೀರ್ತನೆಯ ಮಾಡಿಸೊ
ನಿನ್ನ ಸ್ಮರಣೆಯ ನೀಡು ಸಂತತ ನಿನ್ನ ಪದಸೇವಾ
ನಿನ್ನ ಅರ್ಚನೆಗೈಸೊ ಗುರುವರ
ನಿನ್ನ ವಂದನೆಗೈಸೊ ದಾಸ್ಯವ
ನಿನ್ನ ಗೆಳೆತನ ನೀಡೊ ಯತಿವರ ಎನ್ನನರ್ಪಿಸುವೇ 20

ಅಮಿತ ಮಹಿಮನೆ ನಿನ್ನ ಪಾದಕೆ
ನಮಿಪೆ ಮತ್ಕೃತದೋಶವೆಣಿಸದೆ
ಕ್ಷಮಿಸಿ ಸೌಖ್ಯವನಿತ್ತು ಪಾಲಿಸೊ ಸುಮನಸೋತ್ತಮನೆ
ಅಮರರರಿಯುರಗವ್ಯಮಹಿಮವ
ವಿಮಲಗುಣಮಯ ಪ್ರಬಲತಮ ನೀ–
ನಮರತರು ಚಿಂತಾಮಣಿಯು ಸುರಧೇನು ನೀನಯ್ಯಾ 21

ಶಿರದಿ ನಮನವ ಮಾಡಿ ನಿನ್ನನು
ಕರದ ಸಂಪುಟಮಾಡಿ ವಿನಯದಿ
ಮರೆಯದಲೆ ನಾ ಬೇಡಿಕೊಂಬೆನೊ ಶರಣಪರಿಪಾಲ
ಪರಮಕರುಣೆಯೆ ದ್ವಿಜಗೆ ಬಂದಿಹ
ಮರಣ ಬಿಡಿಸೀ ಸುಖವ ನೀಡಿದೆ
ಅರಿಯಲೆಂದಿಗು ಸಾಧ್ಯವಲ್ಲವೊ ನಿನ್ನ ಮಹಮಹಿಮೆ 22

ಸಕಲಗುಣಗಣಪೂರ್ಣ ಭಕುತಗೆ
ಅಖಿಳಕಾಮಿತದಾತ ಸುಖಮಯ
ವಿಖನಸಾಂಡದಿ ಪ್ರಬಲತಮ ನೀನೆನಿಸಿ ನೆಲಿಸಿರ್ಪೆ
ಲಕುಮಿರಮಣನ ಪ್ರೀತಿಪಾತ್ರನೆ
ಭಕುತಕೈರವಸ್ತೋಮ ಚಂದಿರ
ಮುಕುತಿದಾಯಕ ಮೌನಿಕುಲಮಣಿ ನಮಿಪೆ ಸಲಹೆನ್ನಾ 23

ಸ್ವಸ್ತಿ ಶ್ರೀ ಗುರುರಾಘವೇಂದ್ರಗೆ
ಸ್ವಸ್ತಿ ಗುಣಗಣಸಾಂದ್ರಮೂರ್ತಿಗೆ
ಸ್ವಸ್ತಿ ಶ್ರೀಯತಿನಾಥ ಲೋಕದಿ ಖ್ಯಾತ ಮುಮುನಾಥ
ಸ್ವಸ್ತಿ ಶ್ರೀ ಗುರುಸಾರ್ವಭೌಮಗೆ
ಸ್ವಸ್ತಿ ಶ್ರೀ ಸರ್ವಜ್ಞತಮಗೇ
ಸ್ವಸ್ತಿ ಶ್ರೀ ಸುರಧೇನು ಸುರತರು ನಮಿಪ ಭಕುತರಿಗೆ 24

ಖ್ಯಾತನಾದನು ಸಕಲಲೋಕಕ-
ನಾಥಪಾಲಕನೆಂಬೊ ಬಿರುದನು
ಈತ ಸಂತತ ಪೊತ್ತು ಮೆರೆವನು ಹರಿಯು ಕರುಣದಲಿ
ಈತನೇ ಮಹದಾತ ಜಗದೊಳು
ಖ್ಯಾತ ಮಹಿಮನು ಶರಣವತ್ಸಲ
ದಾತ ಗುರುಜನ್ನಾಥವಿಠಲನ ಸೇವಕಾಗ್ರಣಿಯೂ 25

ಶ್ರೀ ರಾಘವೇಂದ್ರ ವಿಜಯದಲ್ಲಿ ಏಳನೆಯ ಸಂಧಿ
ಸಮಾಪ್ತವಾಯಿತು

# ಎಂಟನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣಬಲದಲಿ
ರಾಘವೇಂದ್ರರ ಭಕುತರಾದವರಿದನ ಕೇಳುವದು॥

ಶರಣು ಶ್ರೀಗುರುರಾಜ ನಿನ್ನಯ
ಚರಣಕಮಲಕೆ ಮೊರೆಯ ಪೊಕ್ಕೆನೊ
ಕರುಣ ಎನ್ನೊಳಗಿರಿಸಿ ಪಾಲಿಸು ಕರುಣ ಸಾಗರನೆ
ಕರಣ ಮಾನಿಗಳಾದ ದಿವಿಜರು
ಶರಣು ಪೊಕ್ಕರು ಮೊರೆಯರೆನ್ನನು
ಕರುಣ ನಿಧಿ ನೀನೆಂದು ಬೇಡಿದೆ ಶರಣ ವತ್ಸಲನೆ 1

ಪಾಹಿ ಪಂಕಜನಯನ ಪಾವನ
ಪಾಹಿ ಗುಣಗಣನಿಲಯ ಶುಭಕರ
ಪಾಹಿ ಪರಮೋದಾರ ಸಜ್ಜನಪಾಲ ಗಂಭೀರ
ಪಾಹಿ ಚಾರುವಿಚಿತ್ರಚರ್ಯನೆ
ಪಾಹಿ ಕರ್ಮಂಧೀಶ ಸರ್ವದ
ಪಾಹಿ ಜ್ಞಾನ ಸುಭಕ್ತಿದಾಯಕ ಪಾಹಿ ಪರಮಾಪ್ತ 2

ಏನು ಬೇಡಲು ನಿನ್ನ ಬೇಡುವೆ
ಹೀನಮನುಜರ ಕೇಳಲಾರೆನೊ
ದೀನ ನರುದ್ಧಾರಿ ಈಪ್ಸಿತದಾನಿ ನೀನೆಂದು
ಸಾನುರಾಗದಿ ನಿನ್ನ ನಂಬಿದೆ
ನೀನೆ ಎನ್ನಭಿಮಾನರಕ್ಷಕ
ನಾನ ವಿಧವಿಧದಿಂದ ಕ್ಲೇಶಗಳಿನ್ನು ಬರಲೇನು 3

ಮುಗಿಲು ಪರಿಮಿತ ಕಲ್ಲುಮುರಿದೂ
ಹೆಗಲ ಶಿರದಲಿ ಬೀಳಲೇನೂ
ಹಗಲಿರಳು ಏಕಾಗಿ ಬೆಂಕಿಯ ಮಳೆಯು ಬರಲೇನು
ಜಗವನಾಳುವ ಧ್ವರಿಯು ಮುನಿದೂ
ನಿಗಡ ಕಾಲಿಗೆ ಹಾಕಲೇನೂ
ಮಿಗಿಲು ದುಃಖ ತರಂಗ ಥರಥರ ಮೀರಿ ಬರಲೇನು 4

ರಾಘವೇಂದ್ರನೆ ನಿನ್ನ ಕರುಣದ–
ಮೋಘ ವೀಕ್ಷಣಲೇಶ ಎನ್ನಲ
ಯೋಗವಾದುದರಿಂದ ಚಿಂತೆಯು ಯಾತಕೆನಗಿನ್ನು
ಯೋಗಿಕುಲ ಶಿರೋರತ್ನ ನೀನಿರೆ
ಜೋಗಿ ಮಾನವಗಣಗಳಿಂದೆನ–
ಗಾಗ್ವ ಕಾರ್ಯಗಳೇನುಯಿಲ್ಲವೊ ನೀನೆ ಸರ್ವಜ್ಞ 5

ಅಮರಶಕ್ವರಿ ಮನೆಯೊಳಿರುತಿರೆ
ಶ್ರಮದಿ ಗೋಮಯ ಪುಡುಕಿ ತರುವರೆ
ಅಮಲತರ ಸುರವೃಕ್ಷ ನೀನಿರೆ ತಿಂತ್ರಿಣಿ ಬಯಕೇ?
ಅಮಿತಮಹಿಮೋಪೇತ ನೀನಿರೆ
ಭ್ರಮಿತರಾಗಿಹ ನರರ ಬೇಡೊದ–
ಪ್ರಮಿತ ವಂದಿತಪಾದಯುಗಳನೆ ನಿನಗೆ ಸಮ್ಮತವೆ 6

ಭೂಪ ನಂದನನೆನಿಸಿ ತಾಕರ–
ದೀಪದೆಣ್ಣೆಗೆ ತಿರುಪೆ ಬೇಡ್ವರೆ
ಆ ಪಯೋನಿಧಿ ತಟದಿ ಸಂತತ ವಾಸವಾಗಿರ್ದು
ಕೂಪಜಲ ತಾ ಬಯಸುವಂದದಿ
ತಾಪ ಮೂರರ ಹಾರಿ ನೀನಿರೆ
ಈಪರೀಪರಿಯಿಂದ ಪರರಿಗೆ ಬೇಡಿಕೊಂಬುವದೆ 7

ಬಲ್ಲಿದರಿಗತಿ ಬಲ್ಲಿದನು ನೀ–
ನೆಲ್ಲ ತಿಳಿದವರೊಳಗೆ ತಿಳಿದವ–
ನೆಲ್ಲಿ ಕಾಣೆನೊ ನಿನಗೆ ಸಮಸುರಸಂಘದೊಳಗಿನ್ನು
ಎಲ್ಲಕಾಲದಿ ಪ್ರಾಣಲಕುಮೀ-
ನಲ್ಲ ನಿನ್ನೊಳು ನಿಂತು ಕಾರ್ಯಗ–
ಳೆಲ್ಲ ತಾನೇಮಾಡಿ ಕೀರ್ತಿಯ ನಿನಗೆ ಕೊಡುತಿಪ್ಪ 8

ಏನು ಪುಣ್ಯವೊ ನಿನ್ನ ವಶದಲಿ
ಶ್ರೀನಿವಾಸನು ಸತತಯಿಪ್ಪನು
ನೀನೆ ಲೋಕತ್ರಯದಿ ಧನ್ಯನು ಮಾನ್ಯ ಸುರರಿಂದ
ದೀನರಾಗಿಹ ಭಕುತಜನರಿಗೆ
ನಾನಕಾಮಿತ ನೀಡೊಗೋಸುಗ
ತಾನೆ ಸರ್ವಸ್ಥಳದಿ ನಿಂತೂ ಕೊಡುವನಖಿಳಾರ್ಥ 9

ಕ್ಷಾಂತಿ ಗುಣದಲಿ ಶಿವನತೆರ ಶ್ರೀ–
ಕಾಂತ ಸೇವೆಗೆ ಬೊಮ್ಮ ಪೋಲುವ–
ನಂತರಂಗಗಭೀರತನದಲಿ ಸಿಂಧುಸಮನೆನಿಪ
ದಾಂತ ಜನರಘುಕುಲಕೆ ವರುಣನ
ಕಾಂತೆ ತೆರ ತಾನಿಪ್ಪ ಶಬ್ದದ್ಯ
ನಂತಪೋಲುವನರ್ಥದಲಿ ಗುರು ರಾಜ್ಯದಲಿ ರಾಮ 10

ಆರುವೊಗನಮರೇಂದ್ರರಾಮರು
ಮೂರುಜನ ಸರಿಯಲ್ಲ ನಿನಗೇ
ಸಾರಿ ಪೇಳುವೆ ದೋಷಿಗಳು ನಿರ್ದೋಷಿ ನೀನೆಂದು
ಆರುವದನ ವಿಶಾಖನಿಂದ್ರಗೆ
ನೂರು ಕೋಪವು ರಾಮದೇವನು
ಸಾರಧರ್ಮದ ಭಂಗಮಾಡಿದ ದೋಷ ನಿನಗಿಲ್ಲ 11

ಸಕಲ ಶಾಖಿಗಳುಂಟು ನಿನಗೇ
ವಿಕಲ ಕೋಪಗಳಿಲ್ಲವೆಂದಿಗು
ನಿಖಿಳ ಧರ್ಮಾಚಾರ್ಯ ಶುಭತಮಚರ್ಯ ಗುರುವರ್ಯ
ಬಕವಿರೋಧಿಯು ಸಖಗೆ ಮುದ್ದಿನ
ಭಕುತವರ ನೀನಾದ ಕಾರಣ
ಲಕುಮಿರಮಣನ ಕರುಣ ನಿನ್ನೊಳು ಪೂರ್ಣವಾಗಿಹದೊ 12

ಹರಿಯತೆರದಲಿ ಬಲವಿಶಿಷ್ಟನು
ಹರನ ತೆರದಲಿ ರಾಜಶೇಖರ
ಸರಸಿಜೋದ್ಭವನಂತೆ ಸಂತತ ಚತುರಸದ್ವದನ
ಶರಧಿತೆರದಲನಂತರತ್ನನು
ಸರಸಿರುಹ ಸನ್ಮಿತ್ರನಂದದಿ
ನಿರುತ ನಿರ್ಜಿತ ದೋಷ ಭಾಸುರಕಾಯ ಗುರುರಾಯ 13

ಇಂದ್ರತೆರದಲಿ ಸುರಭಿರಮ್ಯನು
ಚಂದ್ರತೆರದಲಿ ಶ್ರಿತ ಕುವಲಯೋ–
ಪೇಂದ್ರತೆರದಲಿ ನಂದಕದಿ ರಾಜಿತನು ಗುರುರಾಜ
ಮಂದ್ರಗಿರಿತೆರ ಕೂರ್ಮಪೀಠನು
ವೀಂದ್ರನಂದದಲರುಣಗಾತ್ರನು
ಇಂದಿರೇಶನ ತೆರದಿ ಸಂತತ ಚಕ್ರದರ ಶೋಭಿ 14

ಜಿತತಮನು ತಾನೆನಿಪ ಸರ್ವದ
ರತುನವರ ತಾ ಭುವನ ಮಧ್ಯದಿ
ವಿತತ ಧರಿಗಾಧರ ಸಂತತ ಪಂಚಮುಖ ಮೂರ್ತಿ
ನತಸುಪಾಲಕ ಕಶ್ಯಪಾತ್ಮಜ
ಪ್ರಥಿತರಾಜಸುತೇಜಹಾರಕ
ಸತತ ದೂಷಣ ವೈರಿ ಗೋಕುಲಪೋಷ ತಾನೆನಿಪ 15

ವಿತತಕಾಂತಿಲಿ ಲಸದಿಗಂಬರ
ಪತಿತ ಕಲಿಕೃತಪಾಪಹಾರಕ
ಸತತ ಹರಿಯವತಾರ ದಶಕವ ತಾಳಿ ತಾನೆಸೆವ
ಕೃತಿಯರಮಣನ ಕರುಣಬಲದಲಿ
ನತಿಪಜನಕಖಿಳಾರ್ಥ ನೀಡುವ
ಮತಿಮತಾಂವರನೆನಿಸಿ ಲೋಕದಿ ಖ್ಯಾತನಾಗಿಪ್ಪ 16

ವರವಿಭೂತಿಯ ಧರಿಸಿ ಮೆರೆವನು
ಹರನು ತಾನೇನಲ್ಲ ಸರ್ವದ
ಹರಿನಿವಾಸನು ಎನಿಸಲೂ ಪಾಲ್ಗಡಲುತಾನಲ್ಲ
ಸುರಭಿಸಂಯುತನಾಗಿ ಇರಲೂ
ಮಿರುಪುಗೋಕುಲವಲ್ಲತಾನೂ
ಸುರರಸಂತತಿ ಸಂತತಿರಲೂ ಸ್ವರ್ಗತಾನಲ್ಲ 17

ತುರಗ–ಕರಿ–ರಥ–ನರ ಸಮೇತನು
ನಗವರೇಶನ ದಳವ್ರುಯೆನಿಸನು
ನಿರುತ ಪರಿಮಳ ಸೇವಿಯಾದರು ಭ್ರಮರತಾನಲ್ಲ
ಕರದಿ ದಂಡವ ಪಿಡಿದುಯಿರುವನು
ನಿರಯಪತಿತಾನಲ್ಲವೆಂದಿಗು
ಸುರರಿಗಸದಳವೆನಿಪೊದೀತನ ಚರ್ಯವಾಶ್ಚರ್ಯ 18

ಕರದಿ ಪಿಡದಿಹ ಗುರುವರೇಣ್ಯನು
ಶರಣ ಜನರಾಭೀಷ್ಟ ಫಲಗಳ
ತ್ವರದಿ ಸಲಿಸುತಲವರ ಭಾರವ ತಾನೆ ಪೊತ್ತಿಹನು
ಮರೆಯ ಬೇಡವೊ ಕರುಣನಿಧಿಯನು
ಸ್ಮರಣೆ ಮಾಡಲು ಬಂದು ನಿಲ್ಲುವ
ಪರಮ ಪಾವನರೂಪತೋರಿಸಿ ತಾನೆ ಕಾಯ್ದಿಹನೂ 19

ಅತಸಿ ಪೂ ನಿಭಗಾತ್ರ ಸರ್ವದ
ಸ್ಮಿತಸುನೀರಜನೇತ್ರ ಮಂಗಳ
ಸ್ಮಿತಯುತಾಂಬುಜವದನ ಶುಭತಮರದನ ಜಿತಮದನ
ಅತುಲ ತುಳಸಿಯ ಮಾಲಕಂಧರ
ನತಿಪಜನತತಿಲೋಲ ಕಾಮದ
ಪತಿತ–ಪಾವನ–ಚರಣ ಶರಣಾಂಭರಣ ಗುರುಕರುಣಾ 20

ಚಂದ್ರಮಂಡಲವದನ ನಗೆ ನವ–
ಚಂದ್ರಿಕೆಯತೆರ ಮೆರೆಯಾ ಮೇಘ್ಘನ
ಚಂದ್ರತಿಲಕದ ರಾಗ ಮನದನುರಾಗ ಸೂಚಿಪದೂ
ಇಂದ್ರನೀಲದ ಮಣಿಯ ಮೀರುವ
ಸಾಂದ್ರದೇಹದ ಕಾಂತಿ ಜನನಯ–
ನೇಂದ್ರಿಯದ್ವಯ ಘಟಿತ ಪಾತಕತರಿದು ರಕ್ಷಿಪುದು 21

ಶರಣ ಜನಪಾಪೌಘನಾಶನ
ಶರಣ ನೀರಜ ಸೂರ್ಯಸನ್ನಿಭ
ಶರಣಕುವಲಯಚಂದ್ರ ಸದ್ಗುಣಸಾಂದ್ರ ರಾಜೇಂದ್ರ
ಶರಣಸಂಘಚಕೋರ ಚಂದ್ರಿಕ
ಶರಣ ಜನಮಂದಾರ ಶಾಶ್ವತ
ಶರಣಪಾಲಕ ಚರಣಯುಗವಾಶ್ರಯಿಸಿ ಬಾಳುವೆನೂ 22

ಪಾತಕಾದ್ರಿಗೆ ಕುಲಿಶನೆನಿಸುವ
ಪಾತಕಾಂಬುಧಿ ಕುಂಭಸಂಭವ
ಪಾತಕಾವಳಿ ವ್ಯಾಳವೀಂದ್ರನು ದುರಿತಗಜಸಿಂಹ
ಪಾತಕಾಭಿಧತಿಮಿರಸೂರ್ಯನು
ಪಾತಕಾಂಬುದವಾತ ಗುರು ಜಗ–
ನ್ನಾಥವಿಠಲಗೆ ಪ್ರೀತಿಪುತ್ರನು ನೀನೆ ಮಹಾರಾಯ 23

ಶ್ರೀರಾಘವೇಂದ್ರ ವಿಜಯದಲ್ಲಿ ಎಂಟನೆಯ ಸಂಧಿ
ಸಮಾಪ್ತವಾಯಿತು

## ಒಂಭತ್ತನೆಯ ಸಂಧಿ

ರಾಘವೇಂದ್ರರ ವಿಜಯ ಪೇಳುವೆ
ರಾಘವೇಂದ್ರರ ಕರುಣ ಬಲದಲಿ
ರಾಘವೇಂದ್ರರ ಭಕುತರಾದವರಿದನ ಕೇಳುವದು॥

ಜಯತು ಜಯ ಗುರುರಾಜ ಶುಭತಮ
ಜಯತು ಕವಿಜನಗೇಯ ಸುಂದರ
ಜಯತು ನಿಜ ಜನ ಜಾಲಪಾಲಕ ಜಯತು ಕರುಣಾಳೊ
ಜಯತು ಸಜ್ಜನ ವಿಜಯದಾಯಕ
ಜಯತು ಕುಜನಾರಣ್ಯ ಪಾವಕ
ಜಯತು ಜಯ ಜಯ ದ್ವಿಜವರಾರ್ಚಿತ ಪಾದ ಪಂಕೇಜ 1

ಹಿಂದೆ ನೀ ಪ್ರಹ್ಲಾದನೆನಿಸೀ
ತಂದೆಸಂಗಡ ವಾದ ಮಾಡೀ
ಇಂದಿರೇಶನ ತಂದು ಕಂಬದಿ ಅಂದು ತೋರಿಸಿದೆ
ಮುಂದೆ ನಿನ್ನಯ ಪಿತಗೆ ಸದ್ಗತಿ
ಛಂದದಿಂದಲಿ ಕೊಡಿಸಿ ಮೆರೆದೆಯೊ
ಎಂದು ನಿನ್ನಯ ಮಹಿಮೆ ಪೊಗಳಲು ಎನಗೆ ವಶವಲ್ಲಾ 2

ತೊಳಪುನಾಶಿಕ ಕದಪುಗಳು ಬಲು
ಪೊಳೆವ ಕಂಗಳು ನೀಳ ಪೂರ್ಭುಗ-
ಳೆಸೆವ ತಾಪೆರೆನೊಸಲು ಥಳಥಳನಾಮವಕ್ಷತಿಯು
ಲಲಿತಅರುಣಾಧರದಿ ಮಿನುಗುವ
ಸುಲಿದದಂತಸುಪಂಕ್ತಿ ಸೂಸುವ
ಎಳೆನಗೆಯ ಮೊಗದಲ್ಲಿ ಶೋಭಿಪ ಚುಬುಕ ತಾನೊಪ್ಪ 3

ಕಂಬು ಕಂಠವು ಸಿಂಹ ಸ್ಕಂಧವು
ಕುಂಭಿಕರಸಮ ಬಾಹುಯುಗ್ಮವು
ಅಂಬುಜೋಪಮ ಹಸ್ತಯುಗಳವು ನೀಲಬೆರಳುಗಳು
ಅಂಬುಜಾಂಬಕ ಸದನ ಹೃದಯದಿ
ಅಂಬುಜಾಕ್ಷೀತುಲಸಿ ಮಾಲಾ
ಲಂಬಿತಾಮಲಕುಕ್ಷಿವಳಿತ್ರಯ ಗುಂಭಸುಳಿನಾಭೀ 4

ತೊಳಪುನಾಮಸಮುದ್ರಿಕಾವಳಿ
ಪೊಳೆವೊ ಪಣೆಯೊಳ ಗೂರ್ಧ್ವಪುಂಡ್ರವು
ತಿಲಕದೋಪರಿ ಮಿನುಗೊದಕ್ಷತಿ ರತ್ನ ಮಣಿಯೊಪ್ಪೆ
ಲಲಿತ ಮೇಖಲ ಕೈಪ ಕಟಿತಟ
ಚಲುವ ಊರೂಯುಗಳ ಜಾನೂ
ಜಲಜ ಜಂಘೆಯು ಗುಲ್ಫಪದಯುಗ ಬೆರಳು ನಖವಜ್ರ 5

ಅರುಣ ಶಾಠಿಯು ಶಿರದಲಿಂದಲಿ
ಚರಣ ಪರಿಯಂತರದಲೊಪ್ಪಿರೆ
ಚರಣಪಾದುಕಯುಗಳ ಪುರದಲಿ ನಿರುತ ಶೋಭಿಪದು
ಕರುಣಪೂರ್ಣಕಟಾಕ್ಷದಿಂದಲಿ
ಶರಣ ಜನರನ ಪೊರೆವೊ ಕಾರಣ
ಕರೆದರಾಕ್ಷಣ ಬರುವನೆಂಬೋ ಬಿರುದು ಪೊತ್ತಿಹನು 6

ರಾಯನಮ್ಮೀಜಗಕೆ ಯತಿಕುಲ
ರಾಯನಂ, ಕಲ್ಯಾಣಗುಣಗಣ
ಕಾಯನಂ ನಿಸ್ಸೀಮಸುಖತತಿದಾಯನೆನಿಸಿರ್ಪ
ರಾಯ ವಾರಿಧಿ ವೃದ್ಧ ಗುಣಗಣ
ರಾಯ ನಿರ್ಮಲಕೀರ್ತಿಜೋತ್ಸ್ನನು
ರಾಯರಾಯನುಯೆನಿಸಿ ಶೋಭಿಪನೆಂದು ಕಾಂಬುವೆನು 7

ಗಂಗಿಗಾದುದು ಯಮುನೆಸಂಗದಿ
ತುಂಗತರ ಪಾಲ್ಗಡಲಿಗಾದುದು
ರಂಗನಂಗದಿ ನೈರ್‍ಲ್ಯತೋರ್ಪುದು ಸರ್ವಕಾಲದಲಿ
ಸಿಂಗರಾದ ಸುವಾಣಿದೇವಿಗೆ
ಉಂಗರೋರುಸು ಗುರುಳು ಸರ್ವದ
ಮಂಗಳಾಂಗಿಯು ಗೌರಿ ಹರನಿಂ ಕಪ್ಪು ಎನಿಸಿಹಳೋ 8

ಮದವುಯೇರೋದು ದೇವಜಗಕೇ
ರದನದಲಿ ನಂಜುಂಟು ಫಣಿಗೇ
ಮದವು ಮಹವಿಷ ಕಪ್ಪು ದೋಷವು ಎನಗೆಯಿಲ್ಲೆಂಬ
ಮುದದಿ ಲೋಕತ್ರಯದಿ ತಾನೇ
ಒದಗಿ ದಿನದಿನ ಪೇಳ್ವತೆರದಲಿ
ಸದಮಲಾತ್ಮಕರಾದ ರಾಯರ ಕೀರ್ತಿಶೋಭಿಪದು 9

ಸರ್ವಸಂಪದ ನೀಡೊಗೋಸುಗ
ಸರ್ವಧರ್ಮವ ಮಾಡೊಗೋಸುಗ
ಸರ್ವವಿಘ್ನವ ಕಳಿಯೊಗೋಸುಗ ಕಾರ್ಯನೇರ್ವಿಕೆಗೆ
ಸರ್ವಜನರಿಗೆ ಕಾಮಿತಾರ್ಥವ
ಸರ್ವರೀತಿಲಿ ಸಲಿಸೊಗೋಸುಗ
ಊರ್ವಿತಳದೊಳು ತಾನೆ ಬೆಳಗೊದು ಅಮಲಗುರುಕೀರ್ತಿ 10

ಇಂದು ಮಂಡಲ ರೋಚಿಯೋ ಪಾ–
ಲ್ಸಿಂಧು ರಾಜನ ವೀಚಿಯೋ ಸುರ–
ರಿಂದ್ರನೊಜ್ರಮರೀಚಿಯೋ ಸುರತುರಗ ಸದ್ರುಚಿಯೊ
ಕಂದುಗೊರಳನ ಗಿರಿಯೊ ರಾಘಾ–
ವೇಂದ್ರಗುರುಗಳ ಕೀರ್ತಿಪೇಳ್ವಡೆ
ಮಂದಬುದ್ಧಿಗೆ ತೋರದದಿಂದ ಕೀರ್ತಿರಾಜಿಪದು 11

ನಿಟಿಲ ನೇತ್ರನ ತೆರದಿ ಸಿತ ಸುರ–
ತಟಿನಿ ಯಂದದಿ ಗೌರಗಾತರ
ಸ್ಫಟಿಕಮಣಿಮಯ ಪೀಠದಂದದಿ ಧವಳ ರಾಜಿಪದು
ಮಠದೊಳುತ್ತಮ ಮಧ್ಯಮಂಟಪ
ಸ್ಫುಟಿತಹಾಟಕರತ್ನ ಮುಕುರದ
ಕಟಕಮಯವರ ಪೀಠದಲಿ ಗುರುರಾಯ ಶೋಭಿಸಿದ 12

ಹರಿಯ ತೆರದಲಿ ಲಕ್ಷ್ಮಿನಿಲಯನು
ಹರನ ತೆರದಲಿ ಜಿತಮನೋಜನು
ಸರಸಿ ಜೋದರ ತೆರದಿ ಸರ್ವದ ಸೃಷ್ಟಿಕಾರಣನು
ಮರುತನಂತಾಮೋದಕಾರಿಯು
ಸುರಪನಂತೆ ಸುಧಾಕರನು ತಾ
ಸುರರ ತರುವರದಂತೆ ಕಾಮದ ನೆನಿಪ ಗುರುರಾಯ 13

ಚಿತ್ತಗತ ಅಭಿಲಾಷದಂದದಿ
ಮತ್ತೆ ಮತ್ತೆ ನವೀನ ತಾ ಘನ
ಉತ್ತಮೋತ್ತಮ ಲಕುಮಿಯಂದದಿ ವಿಭವಕಾಸ್ಪದನೂ
ಮತ್ತೆ ಚಂದ್ರನತೆರದಿ ಗುರುವರ
ನಿತ್ಯದಲಿ ಸುಕಳಾಧಿನಾಥನು
ಮೃತ್ಯುಯಿಲ್ಲದ ಸ್ವರ್ಗತೆರದಲಿ ಸುರಭಿ ಸಂಭೃತನು 14

ಗಗನದಂದದಿ ಕುಜಸುಶೋಭಿತ
ನಿಗಮದಂದದಿ ನಿಶ್ಚಿತಾರ್ಥನು
ರಘುಕುಲೇಶನ ತೆರದಿ ಸರ್ವದ ಸತ್ಯಭಾಷಣನು
ನಗವರೋತ್ತಮನಂತೆ ನಿಶ್ಚಲ
ಗಗನ–ನದಿತೆರ ಪಾಪಮೋಚಕ
ಮುಗಿಲಿನಂದದಿ ಚಿತ್ರಚರ್ಯನುಯೆನಿಸಿ ತಾ ಮೆರೆವ 15

ಸರಸಿಜೋದ್ಭವನಂತೆ ಸರ್ವದ
ಸರಸ ವಿಬುಧರ ಸ್ತೋಮವಂದಿತ
ಸುರವರೇಂದ್ರನ ತೆರದಿ ಸಾಸಿರನಯನಕಾಶ್ರಯನು
ತರುಗಳಾರಿಯ ತೆರದಿ ಸಂತತ
ಸುರಗಣಾನನನೆನಿಪ ಕಾಲನ
ತೆರದಿ ಸಂತತ ಕುಜನರಿಗೆ ತಾಪವನೆ ಕೊಡುತಿಪ್ಪ 16

ನಿರುತ ನಿರರುತಿಯಂತೆ ಮದ್ಗುರು–
ವರ ಸದಾ ನವವಿಭವನೆನಿಪನು
ವರುಣ ನಂದದಿ ಸಿಂಧುರಾಜಿತನಮಿತ ಬಲಿಯುತನೂ
ಮರುತನಂತೆ ಸ್ವಸತ್ತ್ವಧಾರಿತ
ಪರಮಶ್ರೀ ಭೂರಮಣಸೇವಕ
ಹರನ ಮಿತ್ರನ ತೆರದಿ ಮಹಧನಕೋಶ ಸಂಯುತನೂ 17

ಈಶನಂತೆ ವಿಭೂತಿಧಾರಕ
ಭೇಶನಂತೆ ಕಳಾಸುಪೂರಣ
ಕೀಶನಂತೆ ಜಿತಾಕ್ಷ ನಿರ್ಜಿತಕಾಮ ಸುಪ್ರೇಮಾ
ವ್ಯಾಸನಂತೆ ಪ್ರವೀಣಶಾಸ್ತ್ರ ದಿ–
ನೇಶನಂದದಿ ವಿಗತದೋಷ ನ–
ರೇಶನಂದದಿ ಕಪ್ಪಕಾಣಿಕೆ ನಿರುತ ಕೊಳುತಿಪ್ಪಾ 18

ವನದತೆರ ಸುರಲೋಕತೆರದಲಿ
ಅನವರತ ಸುಮನೋಭಿವಾಸನು
ಇನನತೆರದಲಿ ಇಂದುತೆರದಲಿ ಕಮಲಕಾಶ್ರಯನು
ವನಜ ನೇತ್ರನ ತೆರದಿ ನಭತೆರ
ಮಿನುಗೊ ಸದ್ವಿಜರಾಜರಂಜಿತ
ಕನಕ ಕವಿತೆಯ ತೆರದಲಂಬುಧಿ ತೆರದಿ ತಾ ಸರಸ 19

ಇನಿತೆ ಗುಣಗಳು ನಿನ್ನೊಳಿಪ್ಪವೊ
ಘನಮಹಿಮ ನೀನೊಬ್ಬ ಲೋಕಕೆ
ಕನಸಿಲಾದರು ಕಾಣೆ ಕಾವರ ನಿನ್ನ ಹೊರತಿನ್ನು
ಮನವಚನ ಕಾಯಗಳ ಪೂರ್ವಕ
ತನುವು–ಮನಿ–ಮೊದಲಾದುದೆಲ್ಲನು
ನಿನಗೆ ನೀಡಿದೆಯಿದಕೆ ಎನಗನುಮಾನಪನಿತಿಲ್ಲ 20

ಹರಿಯು ಭಕುತರ ಪೊರೆದ ತೆರದಲಿ
ಗುರುವೆ ನಿನ್ನಯ ಭಕುತ ಜನರನು
ಧರೆಯ ತಳದಲಿ ಪೊರೆಯೊಗೋಸುಗ ನಿನ್ನ ಅವತಾರ
ಕೊರತೆಯಿದಕೇನಿಲ್ಲ ನಿಶ್ಚಯ
ಪರಮ ಕರುಣಿಯು ನೀನೆ ಎನ್ನನು
ಶಿರದಿ ಕರಗಳನಿಟ್ಟು ಪಾಲಿಸೊ ಭಕುತಪರಿಪಾಲಾ 21

ಎನ್ನ ಪಾಲಕ ನೀನೆ ಸರ್ವದ
ನಿನ್ನ ಬಾಲಕ ನಾನೆ ಗುರುವರ
ಎನ್ನ ನಿನ್ನೊಳು ನ್ಯಾಯವ್ಯಾತಕೆ ಘನ್ನಗುಣನಿಧಿಯೇ
ಬನ್ನ ಬಡಿಸುವ ಭವದಿ ತೊಳಲುವ–
ದನ್ನು ನೋಡೀನೋಡದಂದದಿ
ಇನ್ನು ಕಾಯದಲಿರುವರೇನಾಪನ್ನಪರಿಪಾಲಾ 22

ನಂಬಿಭಜಿಸುವ ಜನಕೆ ಗುರುವರ
ಇಂಬುಗೊಟ್ಟವರನ್ನು ಕಾಯುವಿ
ಎಂಬೋ ವಾಕ್ಯವುಯೆಲ್ಲಿ ಪೋಯಿತೊ ತೋರೊ ನೀನದನು
ಬಿಂಬ ಮೂರುತಿ ನೀನೆ ವಿಶ್ವ ಕು–
ಟುಂಬಿ ಎನ್ನನು ಸಲಹೊ ಸಂತತ
ಅಂಬುಜೋಪಮ ನಿನ್ನ ಪದಯುಗ ನಮಿಪೆನನವರತ 23

ಮಾತೆ ತನ್ನಯ ಬಾಲನಾಡಿದ
ಮಾತಿನಿಂದಲಿ ತಾನು ಸಂತತ
ಪ್ರೀತಳಾಗುವ ತೆರದಿ ಎನ್ನಯ ನುಡಿದ ನುಡಿಯಿಂದ
ತಾತ! ನೀನೇ ಎನಗೆ ಸರ್ವದ
ಪ್ರೀತನಾಗುವದಯ್ಯ ಕಾಮಿತ
ದಾತಗುರುಜಗನ್ನಾಥವಿಠಲ ಲೋಲ ಪರಿಪಾಲ

ಶ್ರೀ ರಾಘವೇಂದ್ರ ವಿಜಯದಲ್ಲಿ ಒಂಭತ್ತನೆಯ ಸಂಧಿಯು
ಸಮಾಪ್ತವಾಯಿತು.